# ॥ ಹರಿಗುರುಸ್ತುತಿಸೌರಭ ॥



ಸಂಕಲನೆ

**ಶ್ರೀಗುರುಸಾರ್ವಭೌಮದಾಸಸಾಹಿತ್ಯಪ್ರಾಜೆಕ್ಟ**
**ಶ್ರೀರಾಘವೇಂದ್ರಸ್ವಾಮಿಮಠ–ಮಂತ್ರಾಲಯ**

ಪ್ರಕಾಶಕರು

**ತತ್ವಸಂಶೋಧನ**
**ಶ್ರೀಫಲಿಮಾರುಮಠ–ಫಲಿಮರು**

1. ಕರಿಸೋ ಧಿಕ್ಕರಿಸೋ ಆದರಿಸೋ ಹ್ಯಾಗಾದದೂ ಬರುವೆ ನಿನ್ನಡಿಗೆ ನಾ ಬರುವೇ------ಗೋಪಾಲದಾಸರು

2. ಎಂದು ಕಾಂಬೆನು ಎನ್ನ ಸಲಹುವ ತಂದೆ ಉಡಪಿಯ ಜಾಣನ-------------ಪ್ರಸನ್ನವೇಂಕಟದಾಸರು

3. ದಯಮಾಡೋ ರಂಗ ದಯಮಾಡೋ------------------------------ಪುರಂದರದಾಸರು

4. ಬಾರಯ್ಯ ರಂಗ ಬಾರಯ್ಯ ಕೃಷ್ಣ ಬಾರಯ್ಯ ಸ್ವಾಮಿ ಬಾರಯ್ಯ---------------ಶ್ರೀಪುರಂದರದಾಸರು

5. ಬಾ ಬಾ ಭಕುತರ ಹೃದಯಮಂದಿರ । ಬಾ ಬಾ ಜಗದೋದ್ಧಾರ-----------------ವಿಜಯದಾಸರು

6. ರಂಗ ಬಾರೋ ಶ್ರೀರಂಗ ಬಾರೋ---------------------------------ಪುರಂದರದಾಸರು

7. ರಂಗ ಬಾರೋ ಪಾಂಡುರಂಗ ಬಾರೋ । ------------------------------ಪುರಂದರದಾಸರು

8. ಕೃಷ್ಣಮೂರತಿ ಕಣ್ಣಮುಂದೆ ನಿಂತಂತೆ ಇದೆ---------------------------ಪುರಂದರದಾಸರು

9. ಬಂದ ಕೃಷ್ಣ ಚೆಂದದಿಂದ ಬಂದ ನೋಡೆ ಗೋಪ -------------------------ವಾಸುದೇವವಿಠ್ಠಲ

10. ರಾಮಕೃಷ್ಣರು ಮನೆಗೆ ಬಂದರು ಬಾಗಿಲು ತೆರೆಯಿರೋ ।----------------ಗುರುಪುರಂದರದಾಸರು

11. ಗರುಡಗಮನ ಬಂದನೋ ನೋಡಿರೋ---------------------------ಶ್ರೀಪುರಂದರದಾಸರು

12. ನೋಡಿದೆ ವೆಂಕಟ ನಿನ್ನ ನೋಡಿದೆ--------------------------------ಗುರುಜಗನ್ನಾಥದಾಸರು

13. ತಪ್ಪು ನೋಡದೆ ಬಂದೆಯಾ ನನ್ನಯ್ಯ ತಂದೆ । -----------------------ಪ್ರಸನ್ನವೇಂಕಟದಾಸರು

14. ಕರುಣಿ ಎಂಬೆ ಕರುಣಾಬ್ಧಿ ಎಂಬೆ । ಶರಣು ಶರಣೆಂಬೆ ಸ್ವಾಮಿ--------------ಪ್ರಸನ್ನವೇಂಕಟದಾಸರು

15. ಶರಣು ಶರಣಯ್ಯ--------------------------------------------ವಿಜಯದಾಸರು

16. ನಮೋ ನಮೋ ವೇಂಕಟೇಶಾ ಸರ್ವೋತ್ತಮಾನೆ ಶ್ರೀಶಾ-----------------ಗುರುಜಗನ್ನಾಥದಾಸರು

17. ಗೋವಿಂದ ಹರಿ ಗೋವಿಂದ ಕೇಶವ ಕೃಷ್ಣ ಜನಾರ್ದನಾ-----------------------ಕನಕದಾಸರು

18. ಪರಮಪುರುಷ ಹರಿ ಗೋವಿಂದ । ಕರಿವರದನಾರಾಯಣ ಗೋವಿಂದ---------------ಕನಕದಾಸರು

19. ರಾಮ ಹರೇ ಹರೇ ರಾಮಹರೆ । ಕೃಷ್ಣಹರೇ ಹರೇ ಕೃಷ್ಣ ಹರೇ-----------------ವರದೇಶದಾಸರು

20. ನಾರಾಯಣ ನಾರಾಯಣ ಗೋವಿಂದ । ಹರಿ--------------------------ಪುರಂದರದಾಸರು

21. ಜಯ ಜಯ ಶ್ರೀರಘುರಾಮ । ಜಯ ಜಯ ಸೀತಾರಾಮ----------------ಗುರುಜಗನ್ನಾಥದಾಸರು

22. ಭಕ್ತರ ಭಿನ್ನಹ ಪರಾಕು ಪರಾಕು । ಭಾಗ್ಯದನಿಧಿಯೆ ಪರಾಕು-----------------ಹೆಳವನಕಟ್ಟೆಗಿರಿಯಮ್ಮ

23. ಸಂಬಳಕಿಟ್ಟುಕೊಳ್ಳೊ ಕೃಷ್ಣಾ ಕೃಪಾಳೋ---------------------------ವೇಣುಗೋಪಾಲದಾಸರು

24. ಈಶ ನಿನ್ನ ಚರಣಭಜನೆ ಆಶೆಯಿಂದ ಮಾಡುವೆನು----------------------------ಕನಕದಾಸರು

25. ತಾರೋ ನಮ್ಮ ಭಂಡಿಯ ಗೋಪಾಲಕೃಷ್ಣ---------------------------------ಶ್ರೀದವಿಠ್ಠಲ

26. ಕಡಗೋಲ ತಾರೆನ್ನ ಚಿನ್ನಾ । ------------------------------------ವ್ಯಾಸರಾಯರು

27. ವಿಠಲಯ್ಯಾ । ವಿಠಲಯ್ಯಾ-------------------------------------ಜಗನ್ನಾಥದಾಸರು

# ಹರಿಗುಣಗಾನ

<1>

ಕರಿಸೋ ಧಿಕ್ಕರಿಸೋ ಆದರಿಸೋ ಹ್ಯಾಗಾದದೂ ಬರುವೆ ನಿನ್ನಡಿಗೆ ನಾ ಬರುವೆ ॥ಪ॥
ತಿರುಮಲೇಶನೆ ನಿನ್ನ ಪದ ಸಂದರುಶನವು ಇಲ್ಲದಲೆ ಇಂದಿಗೆ ।
ವರುಷ ಸಂಪೂರ್ತ್ಯಾಯ್ತು ಮನ ಎಧ್ದರಿಧ್ದರಿದು ನಿನಗೆರಗುತಿದೆ ಮನ,ಕರಿಸೋ ॥ಅ.ಪ॥

ಪಿಡಿದು ತಾಳಗಳ ತಮ್ಮಡಿಗಳೊಳಗೆ ಗೆಜ್ಜೆ ಕಟ್ಟಿ, ಗೆಜ್ಜೆ ಕಟ್ಟಿ ಆರ್ಭಟಿಸಿ ಮನಮುಟ್ಟಿ ।
ಜಡೆಗರಿಯೆ ಶುಕ ಭಾಷ್ಪಪುಲ್ಕಸ ಒಡಲಗಂಟಲ ಬಿಗಿದು ಮೃದು ತೊದಲ್ನುಡಿಗಳನು
ನುಡಿಸುವರ ಕಾಣದೆ ವಡುವುತಿದೆ ಎನ್ನ ಕಂಗಳೀ ಕೊನೆ, ಕರಿಸೋ ॥1॥

ದುರ್ವಾದಿಗಳು ನಿನ್ನ ಸರ್ವೋತ್ತಮತವ ಧಿಕ್ಕರಿಸೆ । ಧಿಕ್ಕರಿಸೆ ದುರ್ಮತವ ಕಿಕ್ಕರಿಸೆ ।
ಹರಿಯೇ ನೀ ಸರ್ವೋತ್ತಮನು ಎಂದರಿದು ಡಂಗುರ ಹೊಯ್ಸಿ ।
ಸಾರುವ ಪರಮ ಭಾಗವತರಂಘ್ರಿ ಪಾಂಸಕೆ ತ್ವರಬಡಿಸುತಿದೆಯನ್ನ ಈ ಶಿರ ॥2॥

ಬಗೆ ಬಗೆ ರತುನಗಳ್ ಬಿಗಿದ ವಾಹನಗಳನೇರಿ । ರಥವೇರಿ ಊದಿಸಲು ತುತ್ತೂರಿ ॥
ಹಗಲು ಪಂಜಿನ ಬೆಳಕಿನಲಿ ಝುಗಝುಗಿಪ ಹಾರಾವಳಿಯ ಬಿಳಿ ಛತ್ರಿಗಳ ನೆರಳಲಿ
ಬರುವ ಚೆಲುವ ಚೆನ್ನಿಗನೆ ವೇಣು ಗೋಪಾಲವಿಠಲನೆ ॥3॥

ಙ಩

<2>

ಎಂದು ಕಾಂಬೆನು ಎನ್ನ ಸಲಹುವ ತಂದೆ ಉಡಪಿಯ ಜಾಣನ ।
ಮಂದಹಾಸಪ್ರವೀಣನ ಇಂದಿರಾ–ಭೂರಮಣನ

ಕಡಲ ಧಡದೊಳು ಎಸೆವ ರಂಗನ, ಕಡೆಗೋಲ್ನೇಣನು ಪಿಡಿದನ ।
ಮೃಡ–ಪುರಂದರರೊಡೆಯನ ಈರಡಿಗಳಲಿ ಶಿರವಿಡುವೆ ನಾ ॥1॥

ದೇವಕಿಯ ಜಠರದಲಿ ಬಂದನ, ಆವ ಪಳ್ಳಿಲಿ ನಿಂದನ ।

ಮಾವಕಂಸನ ಕೊಂದನ, ಕಾವನಯ್ಯ ಮುಕುಂದನ ॥2॥

ಪೂರ್ಣಪ್ರಜ್ಞರಿಗೊಲಿದು ದ್ವಾರಕೆ, ಮಣ್ಣಿನೊಳು ಪ್ರಕಟಿಸಿದನ ಭ–।
ವಾರ್ಣವಕೆ ಪ್ಲವನಾದನ ಪ್ರಸನ್ನವೇಂಕಟಕೃಷ್ಣನ ॥3॥

<3>
ದಯಮಾಡೋ ರಂಗ ದಯಮಾಡೋ ॥
ದಯಮಾಡೋ ನಿನ್ನ ದಾಸನು ನಾನೆದು ॥ಪ॥

ಹಲವು ಕಾಲದಿ ನಿನ್ನ ಹಂಬಲವೆನಗೆ ।
ಒಲಿದು ಪಾಲಿಸಬೇಕೊ ವಾರಿಜನಾಭ ॥1॥

ಇಹಪರಗತಿ ನೀನೆ ಇಂದಿರಾರಮಣ ।
ಸಹಾಯ ನಿನ್ನದು ಸ್ವಾಮಿ ತೋರೋ ಕರುಣಾ ॥2॥

ಕರಿರಾಜವರದನೆ ಕಾಮಿತಫಲದ ।
ಪುರಂದರವಿಠಲ ಹರಿ ಸಾರ್ವಭೌಮ ॥3॥

<4>
ಬಾರಯ್ಯ ರಂಗ ಬಾರಯ್ಯ ಕೃಷ್ಣ ಬಾರಯ್ಯ ಸ್ವಾಮಿ ಬಾರಯ್ಯ ॥ಪ॥
ವಾರಣಭಯವ ನಿವಾರಣಮಾಡಿದ ನಾರಸಿಂಹನೆ ಎನ್ನ ಹೃದಯ ಮಂದಿರಕ್ಕೆ ॥ಅ.ಪ॥

ಮೊದಲಿಂದ ಬರಬಾರದೇ ನಾ ಬಂದೆ ।
ತುದಿಮೊದಲ್ಲಿಲ್ಲದೆ ಹೊಂದಿದೆ ಅಪನಿಂದೆ ।
ಇದುಗೆದ್ದು ಕಳೆದು ಪೊಪುದು ಹೇಗೆ ಮುಂದೆ ।
ಪದುಮನಾಭನೆ ತಪ್ಪು ಕ್ಷಮಿಸಯ್ಯ ತಂದೆ ॥1॥

ಹೆಣ್ಣು ಹೊನ್ನು ಮಣ್ಣಿನಾಸೆಯೊಳಗಿದ್ದು ।
ಪುಣ್ಯಪಾಪಂಗಳನಾನರಿತಿದ್ದು ।
ಅನ್ಯಾಯವಾಯಿತು ಇದಕೇನು ಮದ್ದು।
ನಿನ್ನ ಧ್ಯಾನವ ಕೊಡು ಎನ್ನ ಹೃದಯದೊಳಿದ್ದು ॥2॥

ಇಂದೆನ್ನ ಪೂರ್ವಪಾಂಪಗಳ ಕಳೆದು ।
ಮುಂದೆನ್ನ ಜನ್ಮ ಸಫಲವನ್ನೆ ಗೈದು ।
ತಂದೆಶ್ರೀಪುರಂದರವಿಠಲಾ ನೀನೊಲಿದು ।
ಎಂದೆಂದಿಗಾನಂದಸುಖವನ್ನೆ ಸುರಿದು ॥3॥

ಬಲ

<5>
ಬಾ ಬಾ ಭಕುತರ ಹೃದಯಮಂದಿರ । ಬಾ ಬಾ ಜಗದೋದ್ಧಾರ
ಬಾ ಬಾ ವೇಂಕಟಾಚಲವಿಹಾರ । ಬಾ ಬಾ ಅನೇಕಾವತಾರ ಧೀರ ಶೂರ ॥ಪ॥

ದಕ್ಷ ಕಮಲಾಕ್ಷ ರಾಕ್ಷಸಕುಲಶಿಕ್ಷ ಲಕ್ಷ್ಮಣಾಗ್ರಜ ಲಕ್ಷ್ಮೀವಕ್ಷ ।
ಪಕ್ಷಿವಾಹನ ಪೂರ್ಣಲಕ್ಷಣ ಸರ್ವೇಶ ಮೋಕ್ಷದಾಯಕ ಪಾಂಡವಪಕ್ಷ ॥
ಅಕ್ಷಯವಂತ ಸೂಕ್ಷ್ಮಾಂಬರಧರ ದಕ್ಷ ಪ್ರತ್ಯಕ್ಷಾಧಿದೈವ ।
ಅಕ್ಷತ ನಾರೇರ ತಕ್ಷಣದಲಿ ತಂದ ಅಕ್ಷರಪುರುಷ ಗೋವಿಂದ ॥1॥

ಬಂಗಾರರಥದೊಳು ಶ್ರಿಂಗಾರವಾದ ಶ್ರೀಮಂಗಳಾಂಗ ಕಾಳಿಂಗ ಭಂಗ ।
ರಂಗ ನರಸಿಂಗ ಅಂಗಜಜನಕ ಶಾರ್ಙ ರಥಾಂಗ ಪಾಣಿ ॥
ಸಂಗ ನಿಸ್ಸಗ ಮತಂಗವಿಹಂಗ ಪ್ಲವಂಗನಾಯಕಪರಿಪಾಲಾ ।
ಸಂಗೀತಲೋಲ ಗೋಪಾಂಗನೆಯರ ಅಂತರಂಗಸಂತಾಪವಿದೂರ ॥2॥

ಹತ್ತಾವತಾರದ ಹರಿಯೆ ಘನಸಿರಿಯೆ ನಾನು ಮತ್ತೊಬ್ಬರನು ಹೀಗೆ ಕರೆಯೆ ।
ಭೃತ್ಯರ ಸಂಗಡ ತಿರುಗುವ ಮರಿಯೆ ಎನ್ಹತ್ತಿಲಿ ಆಡುವ ಧೊರೆಯೇ ॥
ಚಿತ್ತದೊಲ್ಲಭ ನಮ್ಮ ವಿಜಯವಿಠಲರೇಯ ಎತ್ತ ನೋಡಲು ನಿನಗೆ ಸರಿಯೆ ।
ಅತ್ತಿತ್ತಪೋಗದೆ ಸಾಗಿಬರುವುದೊ ಎನ್ನೆತ್ತಲು ವೆಂಕಟದೊರೆಯೆ ॥3॥

ജ

<6>
ರಂಗ ಬಾರೋ ಶ್ರೀರಂಗ ಬಾರೋ ॥ಪ॥
ಶ್ರೀರಂಗ ಬಾರೋ ಶ್ರೀರಂಗಬಾರೋ ಮುದ್ದು ರಂಗರಾಬೋ ॥ಅ.ಪ॥

ಮಂಗಳಾತ್ಮಕ ಮನಸಿಜನಯ್ಯನೇ ಬಾರೋ ।
ಅಂಗದಜನಕ ಕಾಳಿಂಗ ಮರ್ಧನೇ ಬಾರೋ ॥1॥

ಪಾಂಡುಸುತರ ಕಾಯ್ವ ಪರಬ್ರಹ್ಮ ಬಾರೋ
ಉದ್ಧಂಡರೂಪ ತೋರಿದ ನರಸಿಂಹನೇ ಬಾರೋ ॥2॥

ಪುಂಡರೀಕಾಕ್ಷ ಶ್ರೀರಾಮಚಂದ್ರಾ ಬಾರೋ ।
ಕೋದಂಡ ಪಾಣಿಲಿಪಿಡಿದ ಮುಕುಂದನೇ ಬಾರೋ ॥3॥

ಮಾವ ಕಂಸನಕೊಂದ ಮಹಿಮನೇ ಬಾರೋ ।
ಮತ್ಸಕೂರ್ಮವರಹ ವಾಮನ ದೇವನೇ ಬಾರೋ ॥4॥

ಕೊಡಲಿಯನು ಪಿಡಿದ  ಕಡು ಶೌರ್ಯ ಬಾರೋ । ಜಗ–।
ದೊಡಯ ಶ್ರೀಪುರಂದರವಿಠಲನೇ ಬಾರೋ ॥5॥

ജ

<7>
ರಂಗ ಬಾರೋ ಪಾಂಡುರಂಗ ಬಾರೋ ।
ರಂಗ ಬಾರೋ ನರಸಿಂಗ ಬಾರೋ ॥ಪ॥

ಕಂದ ಬಾರೋ ಎನ್ನ ತಂದೆ ಬಾರೋ ।
ಇಂದಿರೆರಮಣ ಮುಕುಂದ ಬಾರೋ ॥1॥

ಅಪ್ಪ ಬಾರೋ ತಿಮ್ಮಪ್ಪ ಬಾರೋ ।
ಕಂದರ್ಪನಯ್ಯನೆ ಕಂಚಿವರದ ಬಾರೋ ॥2॥

ಅಣ್ಣ ಬಾರೋ ಎನ್ನ ಚಿನ್ನ ಬಾರೋ ।
ಪುಣ್ಯಮೂರ್ತಿ ಮಹೀಶಪುರಚೆನ್ನ ಬಾರೋ ॥3॥

ವಿಷ್ಣು ಬಾರೋ ಉಡುಪಿ ಕೃಷ್ಣ ಬಾರೋ ।
ಎನ್ನಿಷ್ಟಮೂರ್ತಿ ಪುರಂದರವಿಠಲ ಬಾರೋ ॥4॥

<8>
ಕೃಷ್ಣಮೂರತಿ ಕಣ್ಣಮುಂದೆ ನಿಂತಂತೆ ಇದೆ ॥ಪ॥

ಕಷ್ಟಗಳೆಲ್ಲವ ಪರಿಹರಿಸಿ ಮನ–।
ದಿಷ್ಟಾರ್ಥಗಳನೆಲ್ಲ ಕೊಟ್ಟು ರಕ್ಷಿಸುವ ॥ಅ.ಪ॥

ಮಸ್ತಕದಲಿ ಮಾಣಿಕ್ಯದ ಕಿರೀಟ ।
ಕಸ್ತೂರಿತಿಲಕದಿ ಹೊಳೆವ ಲಲಾಟ ।
ಹಸ್ತದಿ ಕೊಳಲೂದುವ ಓರೆನೋಟ ।
ಕೌಸ್ತುಭ ಎಡಬಲದಲ್ಲಿ ಓಲ್ಯಾಟ ॥1॥

ಘಮಘಮಿಸುವ ಸೊಬಗಿನ ಸುಳಿಗುರುಳು ।
ಚಿಗುರುತುಲಸಿವನಮಾಲೆಯ ಕೊರಳು ।

ಬಗೆಬಗೆ ಹೊನ್ನುಂಗುರವಿಟ್ಟ ಬೆರಳು ।
ಸೊಗಸಿನ ನಾಭಿಯು ತಾವರೆಯರಳು ॥2॥

ಉಡುದಾರ ವಡ್ಯಾಣ ಸಕಲಾಭರಣ ।
ಬೆಡಗುಪೀತಾಂಬರ ಶತರವಿಕಿರಣ ।
ಕಡಗ ಗಗ್ಗಗೆ ಪೆಂಡೆಯನಿಟ್ಟ ಚರಣ ।
ಒಡೆಯ ಪುರಂದರವಿಠಲನ ಕರುಣ ॥3॥

ജ്ഞ

<9>
ಬಂದ ಕೃಷ್ಣ ಚೆಂದದಿಂದ ಬಂದ ನೋಡೆ ಗೋಪ ।
ವೃಂದದಿಂದಾನಂದಿಸುತ ಬಂದ ನೋಡೆ ॥ಪ॥

ಗೋವಮೇವನೀವ ದೇವ ಬಂದ ನೋಡೆ ।
ಸ್ವಾಮಿ ದೇವತಾವಾದ್ಯಗಳಿಂದ ಬಂದನೋಡೆ ॥1॥

ಪಾಪಮೋಪ ಗೋಪರೂಪ ಬಂದ ನೋಡೆ ।
ಸ್ವಾಮಿ ತಾಪಾ ಲೆಪ ಕೋಪಾಲೆಪ ಬಂದ ನೋಡೆ ॥2॥

ಭೂಸುರಸುಖಸೂಸುತ ತಾ ಬಂದ ನೋಡೆ ।
ಸ್ವಾಮಿ ವಾಸುದೇವವಿಠ್ಠಲ ತಾ ಬಂದ ನೋಡೆ ॥3॥

ജ്ഞ

<10>
ರಾಮಕೃಷ್ಣರು ಮನೆಗೆ ಬದರು ಬಾಗಿಲು ತೆರೆಯಿರೋ ।
ಕಾಮಧೇನು ಬಂದಂತಾಯ್ತು ವರವ ಬೇಡಿರೋ ॥ಪ॥

ಚೆಂಡು ಬುಗುರಿ ಚಿಣ್ಣಿಕೋಲು ಗಜುಗವಾಡುತ ।
ದುಂಡುಮಲ್ಲಿಗೆ ಮುಡಿದು ಕೊಳಲನೂದಿ ಪಾಡುತಾ ।
ಹಿಂಡುಪೆಣ್ಗಳ ಮುದ್ದುಮುಖದ ಸೊಬಗ ನೋಡುತಾ ।
ಭಂಡುಮಾಡಿ ಬಾಲೆಯರೊಡನೆ ಸರಸವಾಡುತಾ ॥1॥

ಮಕರಕುಂಡಲ ನೀಲಮುತ್ತಿನ ಬಾವುಲಿಡುತಲಿ ।
ಕಂಕಣ ಹಾರ ತೋಳಬಂದಿ ತೊಡುಗೆ ತೊಡುತಲಿ ।
ಸುಕುಮಾರ ಸುಂದರವಾದ ಉಡುಗೆ ಉಡುತಲಿ ।
ಮುಖದ ಕಮಲ ಮುಗುಳುನಗೆಯ ಸುಖವ ಕೊಡುತಲಿ ॥2॥

ಪೊಕ್ಕಳಲ್ಲಿ ಅಜನ ಪಡೆದ ದೇವದೇವನು ।
ಚಿಕ್ಕ ಉಂಗುಷ್ಠದಲ್ಲಿ ಗಂಗೆಯ ಪಡೆದನು ।
ಮಕ್ಕಳ ಮಾಣಿಕ್ಯ ಗುರುಪುರಂದರವಿಠಲನು ।
ಅಕ್ಕರೆಯಿಂದಲಿ ಮುಕುತಿ ಕೊಡುವ ರಂಗನಾಥನು॥3॥

ജ്ര

<11>
ಗರುಡಗಮನ ಬಂದನೋ ನೋಡಿರೋ ಬೇಗ
ಗರುಡಗಮನ ಬಂದನೋ ॥ಪ॥

ಗರುಡಗಮನ ಬಂದ ಧರಣಿಯಿಂದೊಪ್ಪುತ ।
ಶರಣಾಗತರಿಗೆ ವರಗಳ ಬೀರುತ ॥ಅ.ಪ॥

ಎನ್ನ ರಕ್ಷಿಪ ದೊರೆ ಇಲ್ಲಿಗೆ ತಾ ಬಂದ ।
ಚಿನ್ನವ ಪೋಲುವ ವಿಹಂಗದ ರಥದಲ್ಲಿ ।

ಘನ್ನಮಹಿಮ ಬಂದ ಚನ್ನಮೂರುತಿ ಬಂದ ।
ಸಣ್ಣಕೃಷ್ಣ ಬಂದ ಬೆಣ್ಣೆಕಳ್ಳ ಬಂದ ॥1॥

ಪಕ್ಷಿವಾಹನ ಬಂದ ಲಕ್ಷ್ಮೀಪತಿಯು ಬಂದ ।
ಕುಕ್ಷಿಯೊಳಗೆ ಜಗವ ಇಟ್ಟವ ತಾ ಬಂದ।
ಸೂಕ್ಷ್ಮಸ್ಥೂಲದೊಳು ಇಪ್ಪನು ತಾ ಬಂದ ।
ಸಾಕ್ಷಿಭೂತ ಅವ ಸರ್ವೇಶ್ವರ ಬಂದ ॥2॥

ತಂದೆಪುರಂದರವಿಠಲರಾಯ ಬಂದ ।
ಬಂದು ನಿಂದು ನಲಿದಾಡುತಲಿ ।
ಸಿಂಧುಶಯನ ಬಂದ ಅಂದು ಸಾಂದೀಪನ ।
ನಂದನತಂದಿತ್ತಾನಂದಮೂರುತಿ ಬಂದ ॥3॥

ഇഠ

<12>
ನೋಡಿದೆ ವೆಂಕಟ ನಿನ್ನ ನೋಡಿದೆ ॥ಪ॥

ನೋಡಿದೆ ವೇಂಕಟ ನಿನ್ನ
ಕೊಂಡಾಡಿ ಬೇಡಿದೆ ವರವನ್ನ ಆಹಾ
ರೂಢಿಯೊಳಗೆ ನಿನಗೆ ಈಡುಗಾಣೆನೊ ದೇವ
ನಾಡುದೈವಗಳೆಲ್ಲ ಓಡಿಪೋದವೊ ಸ್ವಾಮಿ ॥ಅ.ಪ॥

ಮಣಿಗಣಮಯದ ಕಿರೀಟ ಕಪ್ಪುವ–
ರಣ ಕುಂತಲದ ಲೋಲ್ಯಾಟ ಯುಗಕ
ರಣಕುಂಡಲ ಬಹುಮಾಟ ಅರ
ಗಿಣಿ ಶಶಿಪೊಲ್ವ ಲಲಾಟ ಆಹಾ
ಎಣೆಗಾಣೆ ಕಸ್ತೂರಿ ಮಣಿದಿರ್ಪ ಭ್ರೂಯುಗ
ಕುಣಿಯುತ ಸ್ಮರಧನು ಗಣಿಸದೊ ಎಲೋದೇವ ॥1॥

ವಾರಿಜಯುಗಸಮನಯನ, ನಾಸ
ಚಾರುಚಂಪಕತೆನೆ, ವದನದೊಳು
ತೋರುವ ಸುಂದರರದನಪಂಕ್ತಿ
ಸಾರಿದಾಧರ ಬಹುಅರುಣ, ಆಹಾ
ಸಾರಸಮುಖದೊಳು ಸೇರಿ ಶೋಭಿಪ ಚುಬಕ,
ಕೂರುಮಯುಗಕದಪು ಸಾರಕಟಾಕ್ಷವ ॥2॥

ಕಂಧರಾಂಕಿತ ಸತ್ರಿರೇಖಾ, ಕಂಠ
ಪೊಂದಿಪ್ಪೊದ್ವರ್ತುಲಕ್ರಮೊಕ, ಕೊರಳ
ಸುಂದರಕೌಸ್ತುಭಪದಕ, ಬಹು
ಬಂಧುರ ಜೈತ್ರ ಸುರೇಖ ಆಹಾ
ಹಿಂದೆ ಸಿಂಹದ ಹೆಗಲಿನಂದದಲೊಪ್ಪಿದ
ಸ್ಕಂಧದಿ ಶೋಭಿಪ ಒಂದು ಸರಿಗೆಯನ್ನು ॥3॥

ಸ್ವನ್ನಏಕಾವಳಿಹಾರಾ, ಬಾ
ವನ್ನ ಮುತ್ತಳಿ ಸಿರಿಯಾಕಾರ, ಬಹು
ಚನ್ನವಾಗಿಹ ನಾನಾಹಾರ, ಶುಭ್ರ
ವರ್ಣಶೋಭಿಪ ಜನಿವಾರ ಆಹಾ
ಇನ್ನು ಗುಂಡಿನಮಾಲೆ, ಘನಜಲಸರಪಳಿ
ಉನ್ನತದಾನರ್ಘ್ಯ ರನ್ನಜಯಂತಿಯಾ ॥4॥

ಶಿರಿವತ್ಸಲಾಂಛನಹೃದಯ, ಸುರ
ಕರಿಕರತೆರ ಬಾಹುಶಿರಿಯಾ, ನಾಲ್ಕು
ಕರಗಳೊಪ್ಪುವವೀಪರಿಯ, ಮೇಲಿ
ನ್ನೆರಡು ಹಸ್ತದಿ ಶಂಖ ಅರಿಯ ಆಹಾ
ವರರತ್ನ ಮುದ್ರಿಕೆ ಧರಿಸಿದ ಬೆರಳುಳ್ಳ
ಕರತೋಡ್ಯ ಕಡಗಕ್ಕೆ ಸರಿಗಾಣೆ ಧರೆಯೊಳು ॥5॥

ಪರಮವೈಕುಂಠದಕಿಂತ ಈ
ಧರಿತಳವಧಿಕವೆನ್ನುತಾ ಬಲ
ಕರದಿಂದ ಜನಕೆ ತೋರುತಾ ಬಾಹು

ಎರಡು ಆಜಾನುಪೂರಿತಾ ಆಹಾ
ಸ್ವರಣರತ್ನಖಚಿತ ವರನಾಗಭೂಷಣ
ಧರಿಸಿ ಟೊಂಕದಿ ವಾಮಕರವಿಟ್ಟು ಮೆರೆವೋದು ॥6॥

ಹಸ್ತಯುಗದಿ ತೋಡ್ಯ ಕಡಗ, ಪ್ರ-
ಶಸ್ತರತ್ನದ್ಧರಳಸಂಘ ರಚಿತ
ಸಿಸ್ತಾದಉಂಗುರ ಬೆಡಗ, ಬಹು
ವಿಸ್ತರಾಂತರ ಭುಜಯುಗ ಆಹಾ
ಹಸ್ತಿವರದ ಸಮಸ್ತಲೋಕಕೆ ಸುಖ
ವಿಸ್ತಾರ ನೀಡುತ ಸಿಸ್ತಾದ ದೇವನ ॥7॥

ಉದರತ್ರಿರೇಖ ರೋಮಾಳಿ, ನಾಭಿ
ಪದುಮಶೋಭಿಪ ಗುಂಭಸುಳಿ, ಮೇಲೆ
ಉದಯಾರ್ಕ ಪೋಲುವ ಕಲೆ ಇಂದ
ಸದಮಲಾಂಬರಪಟಾವಳಿ ಆಹಾ
ಬಿದುರಶೋಭಿತ ಮಹಾಚದುರದೊಡ್ಯಾಣವು ।
ಪದಕ ಮುತ್ತಿನ ತುದಿ ವಿಧವಿಧ ಪೊಳೆವೋದು ॥8॥

ಕುಂಭಿಮಸ್ತಕದೋಲ್ನಿತಂಬ, ದಿಂದ
ರಂಭೆ ಪೋಲುವ ಊರುಸ್ತಂಭ, ಇಂದು
ಬಿಂಬವೆನಿಪ ಜಾನು, ಡಿಂಬ ಭಕ್ತಕ-।
ದಂಬಮೋಹಿಪ ವಿಡಂಬ ಆಹಾ
ಅಂಬುಜಾಸನಪಿತನ ತುಂಬಿದ ಮೀನ್ಜಂಘೆ
ನಂಬಿದ ಜನರನ್ನ ಇಂಬಾಗಿ ಸಲಹೋನಾ ॥9॥

ಪರಡೆರಡುಮಾಣಿಕ್ಯಾವರಣ, ಪೊಳೆವ
ಕಿರುಗೆಜ್ಜೆನೂಪರಾಭರಣ ಇಟ್ಟು
ಮೆರೆವೊ ಗಂಗೆಯ ಪೆತ್ತಚರಣಯುಗ
ನಿರುತ ಭಜಿಪರೊಳತಿ ಕರುಣ ಆಹಾ
ಮರೆಯದೆ ಮಾಡುತ ಪರಿಪರಿಸೌಖ್ಯವ
ಕರೆದು ನೀಡುವನಹಿಗಿರಿವಾಸ ಶ್ರೀಶನ್ನ ॥10॥

ಪೋತೆಂದುನಖಯುತಬೆರಳ ಸಾಲು
ದೂತತತಿಗೆ ಸುಖಗಳ ನಿತ್ತು
ನೀತಜ್ಞಾನಭಕ್ತಿಗಳ ನಿತ್ಯ
ಪ್ರೀತಿಪಡೆಯೆ ಮುಕ್ತಿಗಳ ಆಹಾ
ವಾತಗುರುಜಗನ್ನಾಥವಿಠಲನತಿ
ಪ್ರೀತಿಂದ ಪುರುಷಾರ್ಥದಾತನಾದುದು ನಿತ್ಯ ॥11॥

<13>
ತಪ್ಪು ನೋಡದೆ ಬಂದಯಾ ನನ್ನಯ್ಯ ತಂದೆ ।
ಅಪ್ಪ ತಿರುವೆಂಗಳೇಶನೆ ನಿರ್ಧೋಷನೆ ॥ಪ॥

ಆಪಾದಮೌಳಿ ಎನ್ನೊಳು ಅಘ ಬಹಳ ।
ಶ್ರೀಪತಿ ಕ್ಷಮಿಸಿ ಕಾಯ್ದೆಯಾ ಉದಧಿಧ್ಯೇಯ ॥1॥

ಜಗದಘಹರನೆಂಬುದು ನಿನ್ನಯ ಬಿರುದು ।
ತ್ರಿಗುಣಾತೀತನೆ ರಾಮನೆ ಗುಣಧಾಮನೆ ॥2॥

ಇನ್ನೆನ್ನ ಕಲುಷವಾರಿಸೊ ಭವತಾರಿಸೋ ಪ್ರ– ।
ಸನ್ನವೆಂಕಟರಮಣ ಭಯಶಮನ ॥3॥

<14>
ಕರುಣಿ ಎಂಬೆ ಕರುಣಾಬ್ಧಿ ಎಂಬೆ ।
ಶರಣು ಶರಣೆಂಬೆ ಸ್ವಾಮಿ ॥ಪ॥

ಪರಮಭಾಗವತರ ಅರಿಗಳ ತರಿದು ನೀ ।
ನರಕತಪ್ಪಿಸಿ ನಿಜಪುರಕೊಯ್ಯುವಿ ಎಂದು ॥ಅ.ಪ॥

ತಾಯಿಯೆಂಬೆ ಎನ್ನ ತವರೂರೆಂಬೆ । ತ್ರಾಹಿ ತ್ರಾಹಿ ಎಂಬೆ ಸ್ವಾಮಿ ।
ಬಾ ಎಂಬೆ ಮಾನವರ ಘಾಯಕಾಣಿಸುತಿರೆ । ನೀ ಅಜಾಮಿಳಗಾಶ್ರಯವಿತ್ತೆಂಬೆ ॥1॥

ತಾತನೆಂಬೆ ಆದ್ಯಾಪ್ತನೆಂಬೆ । ನಾಥನಾಥಂಬೆ ಸ್ವಾಮಿ ।
ಪಾತಕಕೌರವರಾತಂಕಬಿಡಿಸಿ ಸಂ –। ಪ್ರೀತಿಲಿ ಪಾಂಡವರ ಕಾಯ್ದಿ ಎಂದು ॥2॥

ಏಕನೆಂಬೆ ಅನೇಕನೆಂಬೆ । ಸಾಕು ಸಾಕೆಂಬೆ ಸ್ವಾಮಿ ।
ಶ್ರೀಕಾಂತ ಪ್ರಸನ್ವೆಂಕಟೇಕಾಂತಭಕ್ತರ । ಬೇಕಾಗಿ ದಡನೂಕುವಿ ಎಂದು ॥3॥

ಓಂ

<15>
ಶರಣು ಶರಣಯ್ಯ ॥ಪ॥

ಶರಣು ಶ್ರೀವೈಕುಂಠನಾಯಕ ಶರಣು ಶ್ರೀಪುರುಷೋತ್ತಮ ।
ಶರಣು ಶ್ರೀಧರ ಗರುಡವಾಹನ ಶರಣು ವೇಂಕಟನಾಯಕ ॥ಅ.ಪ॥

ಪರಮಪದಗೋವಿಂದ ಮಾಧವ ಪದುಮನಾಭ ಜನಾರ್ಧನ ।
ಧರಣಿಧರ ಕರಿವರದ ವಾಮನ ವೈರಿಹರ ಬಲಿಭಂಜನ ॥1॥

ಜಲಜನೇತ್ರ ಮುಕುಂದ ಮುರಹರ ಜ್ವಲಿತಚಕ್ರಗದಾಧರ ।
ಜಲಧಿಶಯನ ಉಪೇಂದ್ರ ಅಚ್ಯುತ ಶೈಲಧರ ನಾರಾಯಣ ॥2॥

ಆದಿಯೋಗಿಮುನೀಂದ್ರವಂದಿತ ನಿಖಿಳಸುರಗಣಸೇವಿತ ।
ವೇದವೇದ್ಯ ವಿರಿಂಚಿಸನ್ನುತ ವಿಜಯವಿಠಲ ನಮೋ ನಮೋ ॥3॥

ಓಂ

<16>
ನಮೋ ನಮೋ ವೇಂಕಟೇಶಾ ಸರ್ವೋತ್ತಮಾನೆ ಶ್ರೀಶಾ ॥ಪ॥

ರಮಾವರನೆ ಸದ್ಧಿಮಾಕರಾರ್ಕಮುಖ
ಸುಮಾನಸಾನತ ಸಮೀರನಗಧೀಶಾ ॥ಅ.ಪ॥

ವರಾವೈಕುಂಠದಿಂದ ಈ ಧರಾತಳಕೆ ಬಂದ
ಚರಾಣಕಮಲಕೆ ಶರಣು ಮಾಳ್ಪರ
ಕರೂಣಿಸೀ ಭವಅರಣದಾಟಿಪ ॥1॥

ಧರೇಶ ತೊಂಡನೃಪಗೇ ನೀ ದರಾರಿ ಇತ್ತವಗೆ
ಧರಾಸುರೇಶನ ಜರಾತರಿದು ಬಹು
ತ್ವರಾದಿ ಯೌವನ ಖರೇಯನೀಡಿದಿ ॥2॥

ಇಭಾರಾಜ ನಿನ್ನ ನುತಿಸೆ ಅಭಾಯವಿತ್ತೆ ಘನ್ನಾ
ಶುಭಾಕರನೆ ನಿನ್ನ ಪ್ರಭಾವ ಕೇಳಿದೆ
ಪ್ರಭೂವೆ ಎನ್ನ ಭವಭಯಾಕಳೆಯೊ ಸ್ವಾಮಿ ॥3॥

ಮಹಾನುಭಾವ ಎನ್ನ ಮನದಲಿ ವಹೀಸಿದೇ ನಿನ್ನ
ಗಹಾನಮಹಿಮನೆ ಮಹಾಪರಾಧವ
ಸಹಾನ ಮಾಡೆಲೊ ಅಹೀಶಗಿರಿವಾಸ ॥4॥

ಪಾತಕಾದ್ರಿಕುಲಿಶಾ ನೀ ವಿಧಾತಾದಿಸುರಕುಲೇಶಾ
ನೀತಾಗುರುಜಗನ್ನಾಥವಿಠಲ ನಿಜ
ದೂತಜನಕತಿಪ್ರೀತಾನಾಗುವೊ ದಾತಾ ॥5॥

ಕಾಣ

<17>
ಗೋವಿಂದ ಹರಿ ಗೋವಿಂದ ಕೇಶವ ಕೃಷ್ಣ ಜನಾರ್ದನಾ ॥ಪ॥

ಮತ್ಸ್ಯಾವತಾರದೊಳಾಡಿದನೆ ಮಂದ–।
ರಾಚಲ ಬೆನ್ನೊಳಗಾಂತವನೆ ।
ಅಚ್ಚಸುಕರನಾಗಿ ಬಾಳಿದನೆ ಮದ–।
ಹೆಚ್ಚೆ ಹಿರಣ್ಯಕನ ಸೀಳಿದನೆ ॥1॥

ಬಲಿಯೊಳು ದಾನವ ಬೇಡಿದನೆ ಕ್ಷಾತ್ರ–।
ಕುಲವ ನಿರ್ಮೂಲನ ಮಾಡಿದನೆ ।
ಜಲನಿಧಿಗೆ ಬಿಲ್ಲ ಹೂಡಿದನೆ ಕಾಮ–।
ಕೊಲಿದು ಗೊಲ್ಲತಿಯೊಳಾಡಿದನೆ ॥2॥

ಸಾಧಿಸಿ ತ್ರಿಪುರರ ಗೆಲಿದವನೆ ಬಲು–।
ವಾದಿಸಿ ಹಯವೇರಿ ಮೆರೆದವನೆ ।
ಮೊದದಿ ವಿಶ್ವವ ಗೆಲಿದವನೆ ಬಾಡ–।
ದಾದಿಕೇಶವ ನಮಗೊಲಿದವನೆ ॥3॥

ജ്യ

<18>
ಪರಮಪುರುಷ ಹರಿ ಗೋವಿಂದ । ಕರಿವರದ ನಾರಾಯಣ ಗೋವಿಂದ ॥ಪ॥
ನಾರಾಯಣ ನಾರಾಯಣ ನಾರಾಯಣ ಹರಿ
ನಾರಾಯಣ ನಾರಾಯಣ ನಾರಾಯಣ ॥

ನಿಶಿಪೆಸರಸುರನ ಉಸುರ ತೊಲಗಿಸಿದ ಕುಸುಮಶರನ ಪಿತ ಗೋವಿಂದ ।
ರಸಪೂರಿತಶ್ರುತಿ ಮಸುಳಿಸದಲೆ ತಂದು ಬಿಸಜಸಂಭವಗಿತ್ತೆ ಗೋವಿಂದ ॥1॥

ಜತನತಪ್ಪದೆ ಅಮೃತಮಥನದಿ ಪರ್ವತವನುದ್ಧರಿಸಿದೆ ಗೋವಿಂದ ।
ಶತಕ್ರತುವಿನ ಶಿರಿ ಹತವಾಗೆ ಕಡಲನು ಮಥಿಸಿ ನಿಲ್ಲಿಸಿ ಕೊಟ್ಟೆ ಗೋವಿಂದ ॥2॥

ಭೂತಳವೆರಸಿ ರಸಾತಳಕಿಳಿದನ ಪಾತಾಳದಿ ಕಂಡೆ ಗೋವಿಂದ ।
ಆತನೊಡನೆ ಕಾದಿ ಖ್ಯಾತಿಲಿ ಮಡುಹಿ ಮಹೀತಳವನು ತಂದೆ ಗೋವಿಂದ ॥3॥

ದುರುಳದೈತ್ಯನ ಸೀಳಿ ಕರುಳಮಾಲೆಯ ಮುಂಗೊರಳೊಳು ಧರಿಸಿದೆ ಗೋವಿಂದ ।
ಗರಳಕಂಧರ ವಿಧಿ ಕರವೆತ್ತಿ ಪೊಗಳಲು ತರಳಗಭಯವಿತ್ತೆ ಗೋವಿಂದ ॥4॥

ವಾಮನನಾಗಿ ನಿಸ್ಸೀಮಬಲಿಯ ಕೈಯ್ಯ ಭೂಮಿಯಳೆದುಕೊಂಡೆ ಗೋವಿಂದ ।
ತಾಮರಸೋದ್ಭವಾಂಡಒಡೆದು ನಿಂದು ವ್ಯೋಮಗಂಗೆಯ ಪೆತ್ತೆ ಗೋವಿಂದ ॥5॥

ವರಪರಶುಧರನಾಗಿ ಭೂಪರ ಧಿಕ್ಕರಿಸಿ ಸಂಹರಿಸಿದೆ ಗೋವಿಂದ ।
ತರಹರಿಸದೆ ವಸುಂಧರೆಯನೆಲ್ಲವ ಭೂಸುರರಿಗೊಪ್ಪಿಸಿಕೊಟ್ಟೆ ಗೋವಿಂದ ॥6॥

ತ್ರಿನಯನನೊಲಿಸಿದ ರಾವಣನನು ರಣಾಂಗಣದೊಳಗೊರಸಿದೆ ಗೋವಿಂದ ।
ಕ್ಷಣವೆನಿಸದೆ ಮಣಿಪುರದಲಿ ವಿಭೀಷಣಗೆ ಶಾಶ್ವತವಿತ್ತೆ ಗೋವಿಂದ ॥7॥

ವಾರಣದಂತವಿಧಾರಣ ಕಂಸಸಂಹಾರಣ ಭುಜಬಲ ಗೋವಿಂದ ।
ವಾರಣಪುರಪತಿದಾರಣಪ್ರಿಯ ಭೂಭಾರೋತ್ತಾರಣ ಗೋವಿಂದ ॥8॥

ಕಥೆಯ ನಿರ್ಮಿಸಿ ಪತಿವ್ರತೆಯರ ಬಲು ವ್ರತಗಳ ಕೆಡಿಸಿದೆ ಗೋವಿಂದ ।
ಜತನದಿಂದ ತ್ರಿಪುರವ ನುರುಹಿ ದೇವತೆಗಳ ಸಲಹಿದೆ ಗೋವಿಂದ ॥9॥

ವಾಜಿಯ ಮರುಕದಿ ತೇಜದಲೇರಿ ಕಾನೋಜುರಾವುತನಾದೆ ಗೋವಿಂದ ।
ವಾಜಿಯ ಬೆನ್ನೊಳು ರಾಜಿಪ ಗುಣದಂತೆ ಈ ಜಗದೊಳಗಿಪ್ಪೆ ಗೋವಿಂದ ॥10॥

ಮೇದಿನಿಗೊಸುಗ ಕಾದಿ ಕಲಹದಿ ವಿರೋಧಿಗಳನು ಕೊಂದೆ ಗೋವಿಂದ ।
ಸಾಧುಗಳಿಗೆ ಸುಖವೈದಿಪ ಕಾಗಿನೆಲೆಯಾದಿಕೇಶವರಾಯ ಗೋವಿಂದ ॥11॥

ॐ

<19>
ರಾಮ ಹರೇ ಹರೇ ರಾಮಹರೆ । ಕೃಷ್ಣಹರೇ ಹರೇ ಕೃಷ್ಣ ಹರೇ ॥

ಕೌಸಲ್ಯಜವರವಂಶೋದ್ಭವ ಸುರಸಂಸೇವಿತಪದ ಶ್ರೀರಾಮ ಹರೇ ।
ಕಂಸಾದ್ಯಸುರರ ಧ್ವಂಸಗೈದ ಯದುವಂಶೋದ್ಭವ ಶ್ರೀಕೃಷ್ಣ ಹರೇ ॥1॥

ಮುನಿಮಖರಕ್ಷಕ ದನುಜರಶಿಕ್ಷಕ ಫಣಿಧರಸನ್ನುತ ರಾಮಹರೇ ।
ಘನವರ್ಣಾಂಗ ಸುಮನಸರೊಡೆಯ ಶ್ರೀ ವನಜಾಸನಪಿತ ಕೃಷ್ಣ ಹರೇ ॥2॥

ಶಿಲೆಯ ಪಾದರಜದಿ ಸ್ತ್ರೀಮಾಡಿದ ಸುಲಲಿತಗುಣನಿಧಿ ರಾಮ ಹರೇ ।
ಬಲುವಕ್ರಾಗಿದ್ದಬಲೆಯ ಕ್ಷಣದಲಿ ಚೆಲುವೆಯ ಮಾಡಿದ ಕೃಷ್ಣ ಹರೇ ॥3॥

ಹರಧನುಭಂಗಿಸಿ ಹರುಷದಿ ಜಾನಕಿ ಕರವ ಪಿಡಿದ ಶ್ರೀರಾಮ ಹರೇ ।
ಸಿರಿರುಕ್ಮಿಣಿಯನು ತ್ವರದಲಿ ಒಲಿಸಿದ ಶರಣರ ಪಾಲಕ ಶ್ರೀ ಕೃಷ್ಣ ಹರೇ ॥4॥

ಜನಕ ಪೇಳೆ ಲಕ್ಷಣ ಸೀತಾ ಸಹ ವನಕೆ ತೆರಳಿದ ಶ್ರೀರಾಮ ಹರೇ ।
ವನಕೆ ಪೂಗಿ ತನ್ನಣುಗರೊಡನೆ ಗೋವನು ಪಾಲಿಪ ಶ್ರೀಕೃಷ್ಣ ಹರೇ ॥5॥

ತಾಟಕಿಖರಮಧುಕೈಟಭಾರಿ ಪಾಪಾಟವಿಸುರಮುಖ ರಾಮ ಹರೇ ।
ಆಟದಿ ಫಣಿಮೇಲ್ ನಾಟ್ಯವನಾಡಿದ ಖೇಟವಾಹ ಶ್ರೀಕೃಷ್ಣ ಹರೇ ॥6॥

ಚದುರೆ ಶಬರಿಯಿತ್ತ ಬದರಿಯ ಫಲನು ಮುದದಿ ಸೇವಿಸಿದ ರಾಮ ಹರೇ ।
ವಿದುರನ ಕ್ಷೀರಕೆ ವದಗಿ ಪೋದ ಶ್ರೀಪದುಮನಾಭ ಜಯ ಕೃಷ್ಣ ಹರೇ ॥7॥

ಸೆವಿತಹನುಮ ಸುಗ್ರೀವನ ಸಖ ಜಗತ್ಪಾವನ ಪರತರ ರಾಮ ಹರೇ ।
ದೇವಕಿವಸುದೇವರ ಸೆರೆಬಿಡಿಸಿದ ದೇವ ದೇವ ಶ್ರೀ ಕೃಷ್ಣ ಹರೇ ॥8॥

ಗಿರಿಗಳಿಂದ ವರಶರಧಿ ಬಂಧಿಸಿದ ಪರಮಸಮರ್ಥ ಶ್ರೀರಾಮ ಹರೇ ।
ಗಿರಿಯ ತನ್ನ ಕಿರಿಬೆರಳಿಲೆತ್ತಿ ಗೋಪರನ ಕಾಯ್ದ ಶ್ರೀಕೃಷ್ಣ ಹರೇ ॥9॥

ಖಂಡಿಸಿ ದಶಶಿರ ಚಂಡಾಡಿದ ಕೋದಂಡಪಾಣಿ ಶ್ರೀರಾಮ ಹರೇ

ಪಾಂಡುತನಯರಿಂ ಚಂಡಕೌರವರ ದಿಂಡುಗೆಡಹಿಸಿದ ಶ್ರೀ ಕೃಷ್ಣ ಹರೇ ॥10॥

ತವಕದಯೋಧ್ಯಾಪುರಕೈದಿದ ತನ್ನುವತಿಯೊಡನೆ ಶ್ರೀರಾಮ ಹರೇ
ರವಿಸುತತನಯಗೆ ಪಟ್ಟವಗಟ್ಟಿದ ಭವತಾರಕ ಶ್ರೀಕೃಷ್ಣ ಹರೇ ॥11॥
ಭರತನು ಪ್ರಾರ್ಥಿಸಲರಸತ್ವವ ಸ್ವೀಕರಿಸಿದ ತ್ವರದಲಿ ರಾಮ ಹರೇ
ವರಧರ್ಮಾದ್ಯರ ಧರಿಯೊಳು ಮೆರೆಸಿದ ಪರಮ ಕೃಪಾಕರ ಕೃಷ್ಣ ಹರೇ ॥12॥

ಧರೆಯೊಳಜ್ಞಜನರನು ಮೋಹಿಪುದಕೆ ಹರನ ಪೂಜಿಸಿದ ರಾಮ ಹರೇ
ಹರನ ಪ್ರಾರ್ಥಿಸಿ ವರವನು ಪಡೆದಾ ಚರಿತೆಯಗಾಧವು ಕೃಷ್ಣ ಹರೇ ॥13॥

ಅತುಳಮಹಿಮ ಸದ್ಯತಿಗಳ ಹೃದಯದಿ ಸತತವಿರಾಜಿಪ ರಾಮ ಹರೇ
ಸಿತವಾಹನಸಾರಥಿಯೆನಿಸಿದ ಸುರತತಿಪೂಜಿತಪದ ಕೃಷ್ಣ ಹರೇ ॥14॥

ರಾಮ ರಾಮ ಯಂದುನೇಮದಿ ಭಜಿಪರ ಕಾಮಿತಫಲದ ಶ್ರೀರಾಮ ಹರೇ
ಪ್ರೇಮದಿ ಭಕ್ತರ ಪಾಲಿಪ ಶ್ರೀವರದೇಶವಿಠಲ ಶ್ರೀಕೃಷ್ಣ ಹರೇ ॥15॥

<20>
ನಾರಾಯಣ ನಾರಾಯಣ ಗೋವಿಂದ । ಹರಿ ।
ನಾರಾಯಣ ನಾರಾಯಣ ಗೋವಿಂದ ।

ನಾರಾಯಣ ನಾರಾಯಣ ಗೋವಿಂದ ಮೂಕುಂದ ।
ಪರತರ ಪರಮಾನಂದ ॥ಅ.ಪ॥

ಮೊದಲು ಮತ್ಸ್ಯನಾಗಿ ಉದಿಸಿ ಸೋಮನ । ಸೆದೆದು ವೇದಗಳ ತಂದ ।
ಮಂದರಧರ ತಾ ಸಿಂಧುವಿನೊಳಮೃತ । ತಂದು ಭಕ್ತರಿಗೆ ಉಣಲೆಂದ ॥
ಮತ್ಸ್ಯ ನಾರಾಯಣ ನಾರಾಯಣ ಗೋವಿಂದ ।
ಕೂರ್ಮನಾರಾಯಣ ನಾರಾಯಣ ಗೋವಿಂದ ॥1॥

ಭೂಮಿಯ ಕದ್ದಾಖಳನ ಮರ್ಧಿಸಿ । ಆ ಮಹಾಸತಿಯಳ ತಂದ ।

ದುರುಳಹಿರಣ್ಯನ ಕರುಳ ಬಗೆದು ತನ್ನ । ಕೊರಳೊಳಗಿಟ್ಟ ಬಗೆಯಿಂದ ।
ವರಾಹ ನಾರಾಯಣ ನಾರಾಯಣ ಗೋವಿಂದ ।
ನರಹರಿನಾರಾಯಣ ನಾರಾಯಣ ಗೋವಿಂದ ॥2॥

ಪುಟ್ಟನಾಗಿ ಮಹಿಕೊಟ್ಟ ಬಲಿಯ ತಲೆ । ಮೆಟ್ಟಿ ತುಳಿದ ಮುದದಿಂದ ।
ಧಾತ್ರಿಯೊಳು ಮುನಿಪುತ್ರನಾಗಿ ಬಂದು । ಕ್ಷತ್ರಿಯರೆಲ್ಲರ ಕೊಂದ ॥
ವಾಮನ ನಾರಾಯಣ ನಾರಾಯಣ ಗೋವಿಂದ ।
ಭಾರ್ಗವನಾರಾಯಣ ನಾರಾಯಣ ಗೋವಿಂದ ॥3॥

ಮಡದಿಗಾಗಿ ಸರಗಡಲನೆ ಕಟ್ಟಿ । ಹಿಡುದು ರಾವಣನ ಕೊಂದ ।
ಗೋಕುಲದಿ ಪುಟ್ಟಿ ಗೋವುಗಳನೇ ಕಾಯ್ದು । ಗೋಪಾಲಕೃಷ್ಣ ತಾ ಬಂದ ॥
ರಾಮ ನಾರಾಯಣ ನಾರಾಯಣ ಗೋವಿಂದ ।
ಕೃಷ್ಣ ನಾರಾಯಣ ನಾರಾಯಣ ಗೋವಿಂದ ॥4॥

ಛಲದಲಿ ತ್ರಿಪುರರ ಸತಿಯರ ವ್ರತದ । ಫಲವನಳಿದ ಮುದದಿಂದ ।
ಧರೆಯೊಳು ಪರಮನೀಚರ ಸವರಿ । ಕುದುರೆಯೇರಿದ ಕಲ್ಕಿ ಛಂದ ॥
ಬುದ್ದ ನಾರಾಯಣ ನಾರಾಯಣ ಗೋವಿಂದ ।
ಕಲ್ಕಿ ನಾರಾಯಣ ನಾರಾಯಣ ಗೋವಿಂದ ॥4॥

ದೋಷದೂರ ಶ್ರೀಪುರಂದರವಿಠಲ ಪೋಷಿತಭಕ್ತಸುವೃಂದ ।
ದೋಷದೂರ ಶ್ರೀಪುರಂದರವಿಠಲ ಪೋಷಿತಭಕ್ತಸುವೃಂದ ॥
ಬದರಿ ನಾರಾಯಣ ನಾರಾಯಣ ಗೋವಿಂದ ।
ಪಂಢರಿ ನಾರಾಯಣ ನಾರಾಯಣ ಗೋವಿಂದ ॥5॥

ಉಡುಪಿ ನಾರಾಯಣ ನಾರಾಯಣ ಗೋವಿಂದ ।
ರಂಗ ನಾರಾಯಣ ನಾರಾಯಣ ಗೋವಿಂದ ॥
ತಿರುಮಲ ನಾರಾಯಣ ನಾರಾಯಣ ಗೋವಿಂದ ।
ವೆಂಕಟ ನಾರಾಯಣ ನಾರಾಯಣ ಗೋವಿಂದ ॥

<21>
ಜಯ ಜಯ ಶ್ರೀರಘುರಾಮ । ಜಯ ಜಯ ಸೀತಾರಾಮ ॥ಪ॥

ಜಯ ಜಯ ಭಜಕರ ಭಯಹರ ತ್ವತ್ಪದ । ದಯದಲಿ ತೋರಿಸೊ ರಾಮ ॥ಅ.ಪ॥

**ಸೂಚನೆ**

ದಶರತನೃಪಸುತ ದಶಕಂಧರ ಮುಖ್ಯ ನಿಶಿಚರಕುಲನಿರ್ಧೂಮ
ಸುರರರ್ಥಿತ ಹರಿ ಧರೆಯೊಳು ತಾನವ ತರಿಸಿದ ರಘಕುಲರಾಮ ॥1॥

ದಶರಥನೃಪಸುತ ಶಿಶುಭಾವದಲಿ ವಸುಮತಿ ಮೊಹಿಪ–ರಾಮ ॥2॥

ಸುಂದರಸ್ವಾನನ ದಿಂದಲಿ ಜನಕಾನಂದವ ಬೀರಿದ–ರಾಮ ॥3॥

ಒಂದಿನ ಮುನಿವರ ಬಂದಾನೃಪವರಕಂದನ ಪ್ರಾರ್ಥಿಸೆ–ರಾಮ ॥4॥

ತಂದೆಗೆ ತಾನಭಿವಂದಿಸಿ ಮುನಿಸಹ ನಂದದಿ ನಡೆದನು–ರಾಮ ॥5॥

ದನುಜರ ಸದೆದಾಮುನಿಮಖ ಪೊರೆದ ಇನಕುಲಸಂಭವ–ರಾಮ ॥6॥

ಶಿಲೆಯನು ತನ ಪದಜಲಜದಲಿಂದ ಲಲನೆಯ ಮಾಡಿದ–ರಾಮ ॥7॥

ಇನಿಯನಿಂದಲಾ ವನಿತೆಯಗೂಡಿಸಿ ಮುನಿಸಹ ನಡೆದನು–ರಾಮ ॥8॥

ಜನಕನ ಪುರವನು ಅನುಜನ ಸಹಿತದಿ ಮುನಿಯೊಡನೈದಿದ–ರಾಮ ॥9॥

ನರವರಸಭೆಯಲಿ ಗಿರಿಶನ ಧನುವನು ಮುರಿದನು ರಾಘವ–ರಾಮ ॥10॥

ಕ್ಷೋಣೀಶನ ಪಣಕ್ಷೀಣಿಸಿ ಸೀತೆಯ ಪಾಣಿಯ ಪಿಡಿದನು–ರಾಮ ॥11॥

ಸುದತಿಯು ನೀಡಿದ ಪದುಮದ ಮಾಲೆಯ ಮುದದಲಿ ಧರಿಸಿದ–ರಾಮ ॥12॥

ಜಾನಕಿ ಸೊಗಸಿನ ಆನನಕಮಲಕೆ ಭಾನುಮನಾದನು–ರಾಮ ॥13॥

ಮಾರ್ಗಮಧ್ಯದಿ ಭಾರ್ಗವ ಬರಲು ಮಾರ್ಗಣ ಎಸೆದನು–ರಾಮ ॥14॥

ಲಕ್ಷಣಸತಿಯುತ ಲಕ್ಷಣ ಸಹಿತದಿ ತಕ್ಷಣ ನಡೆದನು–ರಾಮ ॥15॥

ಸೀತೆಯ ಸಹ ಸಾಕೇತದ ಜನರಿಗೆ ಪ್ರೀತಿಯಗೊಳಿಸಿದ–ರಾಮ ॥16॥

ಧ್ವರಿತನಪಟ್ಟವ ಭರತಗೆ ನೇಮಿಸಿ ತ್ವರದಲಿ ನಡೆದನು–ರಾಮ ॥17॥

ಖರಮುಖದನುಜರ ತರಿದಾ ರಘುವರ ಚರಿಸಿದ ವನವನ–ರಾಮ ॥18॥

ರಾಕ್ಷಸರಾವಣ ವೀಕ್ಷಿಸಿ ಸೀತೆಯ ನಾಕ್ಷಣ ವೈದನು–ರಾಮ ॥19॥

ಪೊಡವಿತನಯಳ ಪುಡುಕುವ ನೆವದಿ ಅಡವಿಯ ಚರಿಸಿದ–ರಾಮ ॥20॥

ಅರಸುತ ಬರುತಿಗೆ ಗಿರಿಯಲಿ ಅಂಜನೆ ತರುಳನ ಕಂಡನು–ರಾಮ ॥21॥

ಅನುಪಮ ಕರುಣದಿ ಹನುಮನ ಗ್ರಹಿಸಿದ ಇನಕುಲಸಂಭವ–ರಾಮ ॥22॥

ಶೀಲ ಬಹುಬಲಶಾಲಿ ಎನಿಸಿಹ ವಾಲಿಯ ಕೊಂದನು–ರಾಮ ॥23॥

ವನಿತೆಯ ಗೋಸುಗ ಹನುಮನು ವೇಗದಿ ವನಧಿಯ ದಾಟಿದ–ರಾಮ ॥24॥

ಬಿಂಕದಿ ಹನುಮನು ಲಂಕೆಯ ಪೊಕ್ಕು ಮಂಕು ದನುಜರ–ರಾಮ ॥25॥

ವನಗಿರಿ ದುರ್ಗದಿ ವನಜಾಕ್ಷಿಯನು ಮನದಣಿ ಪುಡಿಕಿದ–ರಾಮ ॥26॥

ಧಾರುಣಿತನಯಳ ಸಾರುವೆನೆನುತ ಊರಲಿ ಪುಡುಕಿದ–ರಾಮ ॥27॥

ಓಣಿಗಳೊಳು ತಾ ಕ್ಷೋಣಿತನಯಳಾ ಕಾಣದೆ ತಿರುಗಿದ–ರಾಮ ॥28॥

ಲೋಕದ ಮಾತೆಯಾ ಶೋಕವನದೊಳಾ ಲೋಕನಗೈದನು–ರಾಮ ॥29॥

ಕಾಮಿನಿಮಣಿಗೆ ರಾಮನ ವಾರ್ತೆಯ ಪ್ರೇಮದಿ ಪೇಳಿದ–ರಾಮ ॥30॥

ರಾಮನ ಶುಭಕರನಾಮದ ವಾರ್ತೆಯ ಪ್ರೇಮದಿ ಪೇಳಿದ–ರಾಮ ॥31॥

ರೂಢಿಜದೇವಿಯ ಚೂಡಾಮಣಿಯ ನೀಡುವೆನೆಂದನು–ರಾಮ ॥32॥

ಕುಶಲದ ವಾರ್ತೆಯ ಶಶಿಮುಖಿ ಕೇಳಿ ವ್ಯಸನದಿ ನುಡಿದಳು–ರಾಮ ॥33॥

ಕೋತಿಯೆ ಇಲ್ಲಿಗೆ ಯಾತಕೆ ಬಂದೆಯೊ ಘಾತಿಪರಸುರರು–ರಾಮ ॥34॥

ಬಲಹೀನನು ನೀ ಬಲವಂತಸುರರು ಛಲಮಾಡದೆ ನಡಿ–ರಾಮ ॥35॥

ಘನತರ ಲಂಕೆಗ ವನಚರ ಬಂದೆಯೊ ದನುಜರು ಕೊಲ್ವರು–ರಾಮ ॥36॥

ರಾಕ್ಷಸಗುಣ ತಾ ವೀಕ್ಷಿಸಿ ನಿನ್ನನು ಶಿಕ್ಷೆಯ ಗೈವುದು–ರಾಮ ॥37॥

ಮಾತೆಯೆ ತಿಳಿ ಎನಗ್ಯಾತರ ಭಯ ರಘು ನಾಥನು ಕಾಯುವ–ರಾಮ ॥38॥

ಆಖಣಾಶಮ ನಾರಾಯನ ದಯದಲಿ ನೀ ಕರುಣಿಸಿ ತಾಯೆ–ರಾಮ ॥39॥

ಮುತಾತ್ಮಜ ತಾ ಭರದಲಿ ನಡೆದು ತರುಗಳ ಕಿತ್ತಿದ–ರಾಮ ॥40॥

ಅಶೋಕವನದ ಸಶೋಕವಾರ್ತೆಯ ನಿಶಿಚರ ಕೇಳಿದ–ರಾಮ ॥41॥

ಕೋತಿಯ ಹಿಡಿಯಲು ಕಾತುರದಿಂದಲಿ ದೂತರು ಕಳುಹಿದ–ರಾಮ ॥42॥

ಲಕ್ಷ್ಯಮಾಡದೆ ತಕ್ಷಣ ಕೋತಿಯ ಶಿಕ್ಷಿಪೆನೆನುತಲಿ–ರಾಮ ॥43॥

ಬಂದಾ ರಾವಣಕಂದನ ನೋಡಿ ನಂದದಿ ನಲಿದನು–ರಾಮ ॥44॥

ಅಕ್ಷಕುಮಾರನ ಲಕ್ಷಿಯ ಮಾಡದೆ ತಕ್ಷಣ ಕೊಂದನು–ರಾಮ ॥45॥

ಯುದ್ಧದಲತಿ ಸನ್ನದ್ಧರಾದ ಪ್ರಸಿದ್ಧ ದಿತಿಜರು–ರಾಮ ॥46॥

ಶಕ್ತಿಯು ಸಾಲದಶಕ್ತರಾಗಿ ಬಹುಯುಕ್ತಿಯ ಮಾಡ್ದರು–ರಾಮ ॥47॥

ಇಂದ್ರಾರಾತಿಯು ನಂದದಿ ಬಂದು ನಿಂದನು ರಣದಲಿ–ರಾಮ ॥48॥

ಬೊಮ್ಮನಸ್ತ್ರವ ಘಮ್ಮನೆ ಹಾಕಲು ಸುಮ್ಮನೆ ಸಿಕ್ಕನು–ರಾಮ ॥49॥

ಮಾತೆಯ ಕಂಡಾರಾತಿಯ ಪುರವರ ನಾಥನ ಕಂಡನು–ರಾಮ ॥50॥

ಮೂರ್ಖಾಗ್ರಣಿ ಕೇಳ್ ಲೇಖಾಗ್ರಣಿ ಶಿರಿ ಕಾಕುತ್ಸ್ಥಾನ್ವಯ–ರಾಮ ॥51॥

ರಾಮನ ಪದಯುಗತಾಮರಸಕೆ ನಾ ಪ್ರೇಮದ ಭಕ್ತನು–ರಾಮ ॥52॥

ಶ್ರೀನಿಧಿರಾಮನ ಮಾನಿನಿತಸ್ಕರ ದಾನವ ಕೇಳೆಲೊ–ರಾಮ ॥53॥

ದುಷ್ಟನೆ ತಿಳಿ ನೀ ಸೃಷ್ಟಿಯೆ ಮೊದಲಾ ದಷ್ಟಕಕರ್ತನು–ರಾಮ ॥54॥

ಭ್ರಷ್ಟರಾವಣ ಸುರಶ್ರೇಷ್ಠನ ವೈರದಿ ನಷ್ಟನು ನೀನಾಗುವಿ–ರಾಮ ॥55॥

ಜಾನಕಿರಮಣನು ಮಾನವನಲ್ಲವೊ ದಾನವಾಂತಕನು–ರಾಮ ॥56॥

ಬಲವದ್ದ್ವೇಷವು ಸುಲಭಲ್ಲವೊ ತವ ಕುಲನಾಶಾಗೊದೊ–ರಾಮ ॥57॥

ಕಾನನಕೋತಿಯೆ ಏನಾಡಿದಿ ನುಡಿ ಹಾನಿಯ ಮಾಡವೆ–ರಾಮ ॥58॥

ಆ ಕ್ಷಣ ರಾವಣ ರಾಕ್ಷಸಜನರಿಗೆ ಶಿಕ್ಷಿಸಿರೆಂದನು–ರಾಮ ॥59॥

ಕೋತಿಯ ಕೊಂದರೆ ಪಾತಕ ಬಪ್ಪೊದು ಘಾತವು ಸಲ್ಲದು–ರಾಮ ॥60॥

ತರುವರನೇರಿದ ವಾನರಬಾಲದಿ ತರುವೈರಿಯನಿಟ್ಟರು–ರಾಮ ॥61॥

ಹರಿವರ ತಾನೇ ಉರಿಯಲಿ ಲಂಕಾ ಪುರವನು ದಹಿಸಿದ–ರಾಮ ॥62॥

ವಾನರನಾಥನು ಕಾನನ ಸುರವರ ರಾನನಕಿತ್ತನು–ರಾಮ ॥63॥

ದಿತಿಜತತಿಯನು ಹತಗೈದಾ ಕಪಿ ನತಿಸಿದ ಸಾತೆಗೆ–ರಾಮ ॥64॥

ಸಾಗರಲಂಘಿಸಿ ವೇಗದಿ ಬಂದು ಬಾಗಿದ ಸ್ವಾಮಿಗೆ–ರಾಮ ॥65॥

ರಾಮನ ಪದಕೆ ಪ್ರೇಮದಿ ನಮಿಸಿ ಕ್ಷೇಮವ ತಿಳಿಸಿದ–ರಾಮ ॥66॥

ಕಾಮಿನಿಕೊಟ್ಟಿಹ ಹೇಮದ ರಾಗಟೆ ಸ್ವಾಮಿಗೆ ನೀಡಿದ–ರಾಮ ॥67॥

ಗಿರಿತರುಗಳ ತಾ ತ್ವರದಲಿ ತರಿಸಿ ಶರಧಿಯ ಕಟ್ಟಿದ–ರಾಮ ॥68॥

ಕಾಮಿನಿ ನೆವದಲಿ ರಾಮ ದನುಜರಿಗೆ ಆ ಮಹಯದ್ಧವು–ರಾಮ ॥69॥

ಪಾವಿನ ತಾ ಸಂಜೀವನಪರ್ವತ ತೀವ್ರದಿ ತಂದನು–ರಾಮ ॥70॥

ಸೇವಕಹನುಮನು ದೇವನ ತಮ್ಮಗೆ ಜೀವನವಿತ್ತನು–ರಾಮ ॥71॥

ತಂದೆಯ ಪುರದಲಿ ಇಂದ್ರನ ವೈರಿಯ ಕೊಂದನು ಲಕ್ಷ್ಮಣ–ರಾಮ ॥72॥

ಮೂಲ ಬಲವನು ಲೀಲೆಯಿಂದ ನೀ ಮೂರ್ಲವ ಗೈಸಿದ–ರಾಮ ॥73॥

ಅಂಬುಗಳೆಸೆದಾ ಕುಂಭಕರ್ಣನಾ ಕುಂಭಿಣಿಗಿಳಿಸಿದ–ರಾಮ ॥74॥

ರಾಕ್ಷಸವರ್ಯನ ವಕ್ಷೋದಾರಣ ವಾಕ್ಷಣ ಗೈಸಿದ–ರಾಮ ॥75॥

ಗುಣಯುತ ವಿಉಭೀಷಣನಿಗೆ ಪಟ್ಟವ ಕ್ಷಣದಲಿ ಕಟ್ಟಿದ–ರಾಮ ॥76॥

ಮಂದಗಮನಿ ಸಹ ನಂದಿಗ್ರಾಮಕೆ ನಂದದಿ ಬಂದನು–ರಾಮ ॥77॥

ರಾಮನು ಸಾರ್ವಭೌಮನಾಗಿ ಈ ಭೂಮಿಯನಾಳಿದ–ರಾಮ ॥78॥

ರಮೆಯಿಂದಲಿ ತಾ ರಮಿಸಿದ ಸೀತಾ ರಮಣನು ರಘುಕುಲ–ರಾಮ ॥79॥

ಅಂಜನಿತನಯಗೆ ಕಂಜಜಪಟ್ಟವ ರಂಜಿಸಿ ನೀಡಿದ–ರಾಮ ॥80॥

ರಾಜ ರಾಜ ರಾಜೀವನಯನ ತವ ಭೋಜನ ನೀಡಿದ–ರಾಮ ॥81॥

ಕಂಜಾಕ್ಷನಪದಕಂಜಭಜಕ ಪ್ರಾಭಂಜನಸುತ ಕಪಿ–ರಾಮ ॥82॥

ಚಂಪಕ ತರುಲತ ಕಂಪಿತ ಶುಭತರ ಕಿಂಪುರುಷೈದಿದ–ರಾಮ ॥83॥

ಮೋದವೆ ದಕ್ಷ ಪ್ರಮೋದೋತ್ತರ ನಿಜ ಮೋದಾವಯವನು–ರಾಮ ॥84॥

ಪೂರ್ಣರೂಪ ತಾ ಪೂರ್ಣಗುಣಾರ್ಣವ ಪೂರ್ಣನೆನಿಸಿದ–ರಾಮ ॥85॥

ದೂತಜನರ ಗತಿದಾತನು ಗುರುಜಗನ್ನಾಥವಿಠಲನು–ರಾಮ ॥86॥

ꕥ

<22>
ಭಕ್ತರ ಭಿನ್ನಹ ಪರಾಕು ಪರಾಕು । ಭಾಗ್ಯದನಿಧಿಯೆ ಪರಾಕು ॥ಪ॥

ಶೇಷಶಯನ ಶ್ರೀನಿವಾಸ ಪರಾಕು । ಸಾಸಿರನಾಮದ ಒಡೆಯ ಪರಾಕು ।
ದೋಷದುರಿತಹರ ಸ್ವಾಮಿ ಪರಾಕು । ಭಾಷೆಪಾಲಿಪುದೆನ್ನ ವಾಸುದೇವ ಪರಾಕು ॥1॥

ನಿನ್ನ ನಂಬಿದೆ ನೀರಜಾಕ್ಷ ಪರಾಕು । ನಿನ್ನ ರನ್ನೆಯ ಒಲುಮೆ ಬೇಕು ಪರಾಕು ।
ಅನ್ಯರಸಂಗವನೊಲ್ಲೆ ಪರಾಕು । ಎನ್ನಪಕ್ಷೆಯ ಸಲಿಸೋ ಪರಾಕು ॥2॥

ರತಿಪತಿಪಿತಮಾಧವನೆ ಪರಾಕು । ಅತಿರೂಪ ಎನ್ನಯ್ಯನೆ ಪರಾಕು ।
ಹಿತಉಂಟಾದರೆ ಕಾಯೋ ಪರಾಕು । ಕರ್ತೃಹೆಳವನಕಟ್ಟೆರಂಗ ಪರಾಕು ॥3॥

ꕥ

<23>
ಸಂಬಳಕಿಟ್ಟುಕೊಳ್ಳೊ ಕೃಷ್ಣಾ ಕೃಪಾಳೋ ॥ಪ॥
ಸಂಬಳಕಿಇಟ್ಟುಕೋ ನಿನ್ಹಂಬಲದಲ್ಲಿರ ಬೇ–।
ಕೆಂಬುದೇ ಎನಗೆ ತುಂಬಿ ತುಳುಕುತಿದೆ ॥ಅ.ಪ॥

ಆರೆಕವಡಿ ಒಲ್ಲೆ ಸಂಬಳ । ನಿನ್ಸೆಸರ್ಹೇಳಿ ಮಾಡುವೆ ಗೋಪಾಳ ।
ಪರಟಿ ತಂಬುರಿ ಹಿಡಿದು ತಿರಿದುಂಡು ಕೊಂಡು ಬಂದು ।
ಕರೆದಾ ಕೆಲಸಕ್ಕೆ ಸಿದ್ಧನಾಗುವೆ ಈ ಕ್ಷಣ ॥1॥

ಮಧ್ವರಾಯರ ಮನೆಯೊಳು ಅನುಗಾಲ ಇದ್ದೆ ಕೆಳಿಕೋ ಗುಣಗಳ ।
ಪ್ರದ್ಯುಮ್ನ ಇವು ನಿನ್ನ ಬುದ್ಧಿಗೆ ಬಂದರೆ ।
ಇದ್ದಾರೆ ಇರಲಿ ಎಂಬೊದಿದ್ದರೆ ಈ ಕ್ಷಣ ॥2॥

ಬಲುಮಂದಿನ್ನಾ ನೋಡಿದೆ ನಿನ್ನಂಥವರ ಎಲ್ಲಿ ನಾ ನೋಡಲಿಲ್ಲ ।
ಲೋಲಶ್ರೀವೇಣುಗೋಪಾಲ ವಿಠ್ಠಲ ನಿನ್ನ ।
ಕೂಲಿ ಬಂದಾಗ್ಯೂ ರಾಜ್ಯವಾಳಿದಂತೆ ॥3॥

ജ്ഞ

<24>
ಈಶ ನಿನ್ನ ಚರಣಭಜನೆ ಆಶೆಯಿಂದ ಮಾಡುವೆನು ।
ದೋಷರಾಶಿ ನಾಶಮಾಡು ಶ್ರೀಶ ಕೇಶವ ॥ಪ॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಶರಣು ಹೊಕ್ಕೆನಯ್ಯ ಎನ್ನ ಮರಣಸಮಯದಲ್ಲಿ ನಿನ್ನ ।
ಚರಣಸ್ಮರಣೆ ಕರುಣಿಸಯ್ಯ ನಾರಾಯಣ ॥1॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಶೋಧಿಸೆನ್ನ ಭವದ ಕಲುಷ ಭೋಧಿಸಯ್ಯ ಜ್ಞಾನವೆನಗೆ ।
ಬಾಧಿಸುವ ಯಮನ ಬಾಧೆ ಬಿಡುಸು ಮಾಧವ ॥2॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಹಿಂದನೇಕಯೋನಿಗಳಲಿ ಬಂದು ಬಂದು ನೊಂದೆ ನಾನು ।
ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದ ॥3॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟುಮಾತ್ರ ಬೇಡಿಕೊಂಬೆ ।
ಶಿಷ್ಟರೊಳಗೆ ಇಟ್ಟು ಕಷ್ಟಬಿಡಿಸು ವಿಷ್ಣುವೆ ॥4॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಮೊದಲು ನಿನ್ನ ಪಾದಪೂಜೆ ಮುದದಿ ಮಾಡುವೆನು ನಾನು ।
ಹೃದಯದೊಳಗೆ ಒದಗಿಸಯ್ಯ ಮಧುಸೂದನ ॥5॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡು ।
ಜವನಬಾಧೆಯನ್ನು ಬಿಡಿಸೊ ತ್ರಿವಿಕ್ರಮ ॥6॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥
ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ ।
ನೇಮ ಎನಗೆ ಪಾಲಿಸಯ್ಯ ಸ್ವಾಮಿ ವಾಮನ ॥7॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಮದನನಯ್ಯ ನಿನ್ನ ಮಹಿಮೆ ವದನದಲ್ಲಿರುವಂತೆ ।
ಹೃದಯದಲ್ಲಿ ಸದನಮಾಡು ಮುದದಿ ಶ್ರೀಧರ ॥8॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಹುಸಿಯನಾಡಿ ಹೊಟ್ಟೆಹೊರೆವ ವಿಷಯದಲ್ಲಿ ರಸಿಕನೆಂದು ।
ಹುಸಿಗೆ ಹಾಕದಿರಯ್ಯ ಹೃಷೀಕೇಶನೆ ॥9॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಬಿದ್ದು ಭವದ್ಯನೇಕಜನುಮಬದ್ಧನಾಗಿ ಕಲುಷದಿಂದ ।
ಗೆದ್ದುಪೋಪ ಬುದ್ಧಿತೋರೊ ಪದ್ಮನಾಭನೆ ॥10॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಕಾಮಕ್ರೋಧಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು ।
ಶ್ರೀಮಹಾನುಭಾವನಾದ ದಾಮೋಧರ ॥11॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ ।
ಕಿಂಕರನ್ನ ಮಾಡಿಕೊಳ್ಳೊ ಸಂಕರ್ಷಣ ॥12॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಏಸುಜನ್ಮಬಂದರೇನು ದಾಸನಲ್ಲವೇನೊ ನಾನು ।
ಘಾಸಿಮಾಡದಿರು ಎನ್ನ ವಾಸುದೇವನೆ ॥13॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಬುದ್ಧಿಶೂನ್ಯನಾದ ಎನ್ನಾಪದ್ಧಕಾರ್ಯಕುಹಕಮನವ ।
ತಿದ್ದಿ ಹೃದಯ ಶುದ್ಧಮಾಡೋ ಪ್ರದ್ಯುಮ್ನನೆ ॥14॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಜನನಿ ಜನಕ ನೀನೆ ಎಂದು ನೆನೆವೆನಯ್ಯ ಧೀನಬಂಧು ।
ಎನಗೆ ಮುಕ್ತಿಪಾಲಿಸಿಂದು ಅನಿರುದ್ಧನೆ ॥15॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಪ್ರೇಮ ।
ಇರಿಸು ನಿನ್ನ ಚರಣದಲ್ಲಿ ಪುರುಷೊತ್ತಮ ॥16॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಸಾಧುಸಂಗಕೊಟ್ಟು ನಿನ್ನ ಪಾದಭಜನೆ ಇತ್ತು ಎನ್ನ ।
ಭೇಧಮಾಡಿ ನೋಡದಿರು ಅಧೋಕ್ಷಜ ॥17॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಚಾರುಚರಣತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ ।
ಭಾರಹಾಕಿರುವೆ ನಿನಗೆ ನಾರಸಿಂಹನೆ ॥18॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಸಂಚಿತಾದ ಪಾಪಗಳು ಕಿಂಚಿತಾದ ಪೀಡೆಗಳು ।
ಮುಂಚಿತಾಗಿ ಕಳೆದು ಪೊರೆಯೊ ಸ್ವಾಮಿಅಚ್ಯುತ ॥19॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಜ್ಞಾನಭಕ್ತಿಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಸದಾ ।
ಹೀನಬುದ್ಧಿ ಬಿಡಿಸು ಮುನ್ನ ಶ್ರೀಜನಾರ್ದನಾ ॥20॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಜಪತಪಾನುಷ್ಠಾನವಿಲ್ಲದ ಕುಪಥಗಾಮಿಯಾದ ಎನ್ನ ।
ಕೃಪೆಯ ಮಾಡಿ ಕ್ಷಮಿಸಬೇಕು ಉಪೇಂದ್ರನೆ ॥21॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಮೊರೆಯ ಇಡುವೆನಯ್ಯ ನಿನಗೆ ಶರಧಿಶಯನ ಶುಭಮತಿಯ ।
ಇರಿಸೊ ಭಕ್ತನೆಂದು ಪರಮಪುರುಷ ಶ್ರೀಹರಿ ॥22॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಪುಟ್ಟಸಲುಬೇಡ ಇನ್ನು ಪುಟ್ಟಿಸಿದಕೆ ಪಾಲಿಸಿನ್ನು ।
ಇಷ್ಟುಮಾತ್ರ ಬೇಡಿಕೊಂಬೆ ಶ್ರೀಕೃಷ್ಣನೆ ॥23॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವವನ ।
ಅರ್ತಿಯಿಂದ ಸಲಹುವ ಕರ್ತೃಕೇಶವ ॥24॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ಮರೆಯದಲೆ ಹರಿಯ ನಾಮ ಬರೆದು ಓದಿ ಕೇಳುವರ್ಗೆ ।
ಕರೆದು ಮುಕ್ತಿಕೊಡುವ ನೆಲೆಯಾದಿಕೇಶವ ॥25॥
ರಾಮ ರಾಮ ರಾಮ ರಾಮ ರಾಮ ರಾಮ ರಾಮರಾಮ
ರಾಮ ರಾಮ ರಾಮ ಕೋದಂಡರಾಘವ ॥

ജ

<25>
ತಾರೋ ನಮ್ಮ ಬಂಡಿಯ ಗೋಪಾಲಕೃಷ್ಣ ||ಪ||

ಅತ್ತರೇನು ಕಂಗಳಿಂದ ಮುತ್ತು ಸುರಿಯೋದಿಲ್ಲೊ ರಂಗ ।
ಮತ್ತೆ ನಮ್ಮ ಮೇಲ್ಬಂಡಿ ಹೊತ್ತರೆ ನೀ ಬಿಟ್ಟಿಯೇನೊ ||1||

ವಾರಿಜಾಕ್ಷ ನಿನ್ನ ಬಡಿವಾರವೇನೊ ಬೆನ್ನಮೇಲೆ ।
ಹಾರಿಹತ್ತಿಕೊಂಡು ಭಾರಹೇರದೆ ನಾವ್ ಬಿಟ್ಟೆವೇನೋ ||2||

ಕೊಟ್ಟುಹೋಗೆಂದರ್ಯಾಕೆ ಸಿಟ್ಟು ಮಾಡುವಿಯೋ ಶ್ರೀದ–।
ವಿಠಲ ಕೂಡ್ಯಾಡಿದಮೇಲೆ ಬಿಟ್ಟರೆ ನಾವ್ ಬಿಡುವೋರಲ್ಲೊ||3||

ೞೞ

<26>
ಕಡಗೋಲ ತಾರೆನ್ನ ಚಿನ್ನಾ । ಮೊಸರೊಡೆದರೆ ಬೆಣ್ಣೆ ಬಾಹೊದೊ ಮುದ್ದುರನ್ನ ||ಪ||

ಅಣ್ಣನ ಒಡಗೂಡಿ ಬಾರಯ್ಯ ಸವಿ । ಬೆಣ್ಣೆಯ ಮುದ್ದೆಯ ಮೆಲ್ಲುವಿರಂತೆ ।
ಬಣ್ಣ ಸರವ ನಿನ್ನ ಕೊರಳಿಗೆ ಹಾಕುವೆ । ಚಿಣ್ಣರೊಡನೆ ಆಡಹೋಗುವಿಯಂತೆ ||1||

ಪುಟ್ಟಬಚ್ಚಯ ತಂದು ನಿನ್ನಯ ಚಿನ್ನದ । ತೊಟ್ಟಿಲ ಕಾಲಿಗೆ ಕಟ್ಟಿಸುವೆ ।
ಬಟ್ಟಲು ತುಂಬಿದ ಸಕ್ಕರೆ ನಿನಗೀವೆ । ಕಟ್ಟಾಣಿ ಮುತ್ತಿನ  ಸರಗಳ ಇಡುವೆ ||2||

ಬಡವರ ಭಾಗ್ಯದ ನಿಧಿಯೇ ಗೋಕುಲದ ಎನ್ನೊಡೆಯ ಮಕ್ಕಳ ಮಾಣಿಕ್ಯವೇ ।
ಕಡು ಮುದ್ದು ಉಡುಪಿಯ ಬಾಲಕೃಷ್ಣಯ್ಯ । ನೀ । ಪೆಂಗಳರೊಳು
ದುಡುಕು ಮಾಡುವರೇನೋ ರಂಗ ||3||

ೞೞ

<27>
ವಿಠಲಯ್ಯಾ । ವಿಠಲಯ್ಯಾ ॥ಪ॥

ತಟಿತ್ಕೋಟಿನಿಭಕಾಯ ಜಗನ್ನಾಥ

ಭಜಿಸುವೆ ನಿನ್ನನು ಅಜಭವಸುರನುತ ।
ಭಜಕಾಮರತರು ಕುಜನಕುಠಾರಿ ॥1॥

ನೀ ಕರುಣಿಸದೆ ನಿರಾಕರಿಸಲು ಎನ್ನ ।
ಸಾಕುವರ್ಯಾರೋ ದಯಾಪರಮೂರುತಿ ॥2॥

ಶರಣಾಗತರನು ಪೊರೆವೆನೆಂಬ ತವ ।
ಬಿರುದು ಕಾಯೊ ಕರಿವರದಜಗನ್ನಾಥವಿಠಲಯ್ಯ ॥3॥

ജ്ഞ

<28>
ನೀ ಕರುಣಿಸೋ ವಿಠ್ಠಲ ನಮ್ಮನು । ಸಾಕೋ ಪಂಢರಿವಿಠ್ಠಲಾ ॥ಪ॥

ದೋಷಿಗಳೊಳಗೆ ಹಿರಿಯನು ನಾ ನಿರ್ದೋಷಿಗಳರಸೇ ವಿಠ್ಠಲಾ ।
ಸಾಸುವೆಯಷ್ಟು ಭಕುತಿಯನರಿಯೊನೋ ಶೇಷಶಯನ ಹರಿ ವಿಠ್ಠಲಾ ॥1॥

ಭವಸಾಗರದೊಳು ಮುಳುಗುವೆ ಸುಮ್ಮನೆ ಅವಲೋಕಿಪರೆ ವಿಠ್ಠಲಾ ।
ನವನವವಿಷಯಕೆ ಹಿಗ್ಗುತಲಿಹ ಮನದವಸರ ಕಾಯೋ ವಿಠ್ಠಲಾ ॥2॥

ನಿಶಿದಿನ ಅಶನಾವಸನಕೆ ಹೇಣಗಿ ಹುಸಿಯ ಸಂಗ್ರಹಿಸಿದೆ ವಿಠ್ಠಲಾ ।
ನಿಷೇಧ ಮಾಯಾ ಇಲ್ಲವು ನರಕದ ಘಸಣಿಗೆ ಅಂಜುವೆ ವಿಠ್ಠಲಾ ॥3॥

ತನುಸಂಬಂಧಿಗಳತಿಕಾರ್ಯಾರ್ಥಿಗಳ್ಯನಗ್ಯಾರಿಲ್ಲೋ ವಿಠ್ಠಲಾ ।
ಬಿನುಗು ಮಾನವರ ಅನುಸರಣಿಯಲಿ ದಣಿಸದಿರಯ್ಯ ವಿಠ್ಠಲಾ ॥4॥

ಝೂವಕೆ ಮಾಡುವೆ ಸಾವಿರತಪ್ಪನು ಕಾಯೋ ದಯಾಂಬುಧೆ ವಿಠ್ಠಲಾ ।
ಶ್ರೀವರಪ್ರಸನ್ನವೇಂಕಟವಿಠ್ಠಲ ಜೀವಕೆ ಹೊಣೆ ನೀ ವಿಠ್ಠಲಾ ॥5॥

<29>
ನರಸಿಂಹ ಪಾಹಿಲಕ್ಷ್ಮೀ ನರಸಿಂಹ ॥ಪ॥

ನರಸಿಂಹ ನಮಿಪೆ ನಾ ನಿನ್ನ । ಚಾರು
ಚರಣ ಕಮಲಕೆ ನೀ ಎನ್ನ । ಆಹಾ ।
ಕರವ ಪಿಡುದು ನಿಜ ಶರಣನೆಂದೆನಿಸು ಭಾಸುರ
ಕರುಣಾಂಬುಧಿ ಗರುಡವಾಹನ ಲಕ್ಷ್ಮೀನರಸಿಂಹ ॥ಅ.ಪ॥

ತರಳ ಪ್ರಹ್ಲಾದನ ನುಡಿಯ ಕೇಳಿ ।
ತ್ವರಿತದಿ ಬಂದ್ಯೋ ಎನ್ನೊಡೇಯ ಅನು ।
ಕರುಣಾಳು ಭಕ್ತರ ಭಿಡೆಯ ಮೀರಲರಿಯನೆಂದೆಂದು ಕೆಂಗಿಡಿಯ ॥ ಆಹಾ ।
ಭರದಿಂದುಗುಳುತ ಬೊಬ್ಬಿರಿದು ಬೆಂಬತ್ತಿ ಕ-।
ರ್ಬುರಶಶ್ಯಪುವಿನ ಹಿಂಗುರುಳ ಪಿಡಿದೆ ಲಕ್ಷ್ಮೀನರಸಿಂಹ ॥1॥

ಪ್ರಳಯಾಂಬುನಿಧಿ ಘನ ಘೋಷದಂತೆ ।
ಘುಳಿಘುಳಿಸುತಲಿ ಪ್ರದೋಷ । ಕಾಲ
ತಿಳಿದು ದೈತ್ಯನಲ್ಲತಿ ರೋಷ ದಿಂದ । ಅಪ್ಪಳಿಸಿ ಮೇದಿನಿಗೆ ನಿರ್ದೋಷ ॥ ಆಹಾ ।
ಸೀಳೆದೆಳೆಯುತ ಚರ್ಮಸುಲಿದು ಕೆನ್ನೆತ್ತರೋ-।
ಕುಳಿಯನಾಡಿದೆ ದಿಶಾವಳಿಗಳೊಳಗೆ ಲಕ್ಷ್ಮೀನರಸಿಂಹ ॥2॥

ಕ್ರೂರ ದೈತ್ಯರ ಘೋರಗರುಳ ತೆಗೆ-।
ದ್ವಾರ ಮಾಡಿದೆ ನಿಜ ಕೊರಳ ಕಂಡು ।
ವಾರಿಜಾಸನ ಮುಖ್ಯರರಳ-ಪುಷ್ಪ ಭೂರಿಗರಿಯೆ ವೇಗ ತರಳ ॥ ಆಹಾ ।
ಧೀರ ಪ್ರಲ್ಹಾದಂಗೆ ತೋರಿತ್ವದಂಘ್ರಿ ಸ-।
ರೋರುಹವನೆ ಕಾಯ್ದೆ ಕಾರುಣ್ಯ ನಿಧಿ ಲಕ್ಷ್ಮೀನರಸಿಂಹ ॥3॥

ಜಯ ಜಯ ದೇವ ವರೇಣ್ಯ ಮಹದ್ಭಯ ನಿವಾರಣ ಅಗ್ರಗಣ್ಯ ।
ಗುಣತ್ರಯ ದೂರ ದುರಿತಾರಣ್ಯ ಧನಂಜಯ ಜಗದೇಕ ಶರಣ್ಯ । ಆಹಾ ।
ಲಯವಿವರ್ಜಿತ ಲೋಕತ್ರಯವ್ಯಾಪ್ತ ನಿಜಭಕ್ತ ।
ಪ್ರಿಯ ಘೋರಾಮಯ ಹರ ದಯಮಾಡೆನ್ನೊಳು ಲಕ್ಷ್ಮೀನರಸಿಂಹ ॥4॥

ಕುಟಿಲ ದ್ವೇಷದವ ನೀನಲ್ಲ ನಿನ್ನಾ–।
ರ್ಬಟಕಂಜಿದರು ಸುರರೆಲ್ಲ ನರ ನಟನೆ ಮಾಡಿದ್ಯೋ ಲಕ್ಷ್ಮೀ ನಲ್ಲ । ನಾಪಾ–।
ಸಟಿಗಾಣೆನಪ್ರತಿಮಲ್ಲ ॥ ಆಹಾ ।
ವಟಪತ್ರಶಯನ ಧೂರ್ಜಟಿ ವಂದ್ಯ ಜಗನ್ನಾಥವಿಠ್ಠಲ ಕೃತಾಂಜಲಿ
ಪುಟದಿ ಬೇಡುವೆ ಲಕ್ಷ್ಮೀನರಸಿಂಹ ॥5॥

<30>
ಇದೆ ಪಾಲಿಸು ಇದೆ ಪಾಲಿಸು ಇದೆ ಪಾಲಿಸಯ್ಯ ।
ಪದುಮಸಂಭವಪಿತನೆ ಪದೆ ಪದೆ ಎನಗಿನ್ನು ॥ಪ॥

ಜೀವ ಅಸ್ವಾಂತಂತ್ರ್ಯ ದೇವ ನಿಜಸ್ವಾತಂತ್ರ್ಯ ।
ಜೀವಜಡರು ದೇವರಾಧೀನವೆಂದು ।
ಜಿವೋತ್ತಮರಲಿ ಭಕುತಿ ಜಡದಲ್ಲಿ ವಿರಕುತಿ ।
ಕಾವಕೊಲ್ಲುವುದೆಲ್ಲ ಹರಿ ಎಂಬೊ ಜ್ಞಾನವ ॥1॥

ಬಿಂಬಚಲಿಸಿದರೆ ಪ್ರತಿಬಿಂಬಚಲಿಸುವುನು ।
ಬಿಂಬಪೂರ್ಣನು ಪ್ರತಿಬಿಂಬನು ಅಲ್ಲ ।
ಉಂಬುಡುವೋ ಕ್ರಿಯೆಗಳು ಬಿಂಬಮಾಡಿಸೆ ಪ್ರತಿ– ।
ಬಿಂಬಕ್ಕೆ ಉಂಟೆಂಬ ಬಿಂಬಕ್ರಿಯವು ಎನಗೆ ॥2॥

ಎನ್ನ ಬಿಂಬನೆ ಸರ್ವಬಿಂಬನುಎಂದು ।
ಇನ್ನು ಪ್ರತಿಬಂಬಗಳ ಭಿನ್ನತೆ ತಿಳಿದು ।
ಮನ್ನಣೆ ಉತ್ತಮರಿಗೆ ಅಮನ್ನಣೆ ನೀಚರಿಗೆ ।
ಭಿನ್ನಭಿನ್ನರಿಗೆ ಫಲವನ್ನು ಕೊಡುವ ಜ್ಞಾನ ॥3॥

ಪುಣ್ಯಪಾಪಗಳೆರಡು ಇನ್ನು ಆಗುತಿರಲು ।
ಎನ್ನದೆಂದು ಹಿಗ್ಗಿಕುಗ್ಗದಲೆ ।
ಭಿನ್ನಪುಣ್ಯದ ಜೀವ ಭಿನ್ನಪಾಪದ ಜೀವ ।
ಇನ್ನು ಮುನ್ನ ತಿಳಿವ ಭಿನ್ನಜ್ಞಾನವೆ ಎನಗೆ ॥4॥

ಬಂಧನ ನಿವೃತ್ತಿ ಎಂದಿಗು ನನಗೆಂದು ।
ಸಂದೇಹದಿಂದ ನಾ ಕೇಳಲಿಲ್ಲ ।
ಸುಂದರಮೂರುತಿ ಗೋಪಾಲವಿಠಲ ।
ಕುಂದಿಲ್ಲದಲೆ ಎನಗೆ ನವವಿಧಭಕುತುಯ ॥5॥

## ಭಾರ್ಗವಿಯ ಭವ್ಯಸ್ತುತಿ

<31>

ಭಾಗ್ಯಾದ ಲಕ್ಷ್ಮೀ ಬಾರಮ್ಮ । ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ ॥ಪ॥

ಹೆಜ್ಜೆಯ ಮೇಲೊಂದ್ಹೆಜ್ಜೆಯ ನಿಕ್ಕುತ । ಗೆಜ್ಜೆಯ ಕಾಲಿನ ನಾದವ ತೋರುತ ।
ಸಜ್ಜನಸಾಧು ಪೂಜೆಯ ವೇಳಗೆ । ಮಜ್ಜಿಗೆಯೊಳಗಿನ ಬೆಣ್ಣೆಯಂತೆ ॥1॥

ಕನಕವೃಷ್ಟಿಯ ಕರೆಯುತ ಬಾರೆ ಮನ । ಕಾಮನೆಯ ಸಿದ್ಧಿಯ ತೋರೆ ।
ದಿನಕರಕೋಟಿತೇಜದಿ ಹೊಳೆಯುವ । ಜನಕರಾಯನ ಕುಮಾರಿ ಬೇಗ ॥2॥

ಅತ್ತಿತ್ತಗಲದೆ ಭಕ್ತರ ಮನೆಯೊಳು ನಿತ್ಯಮಹೋತ್ಸವ ನಿತ್ಯಸುಮಂಗಲ ।
ಸತ್ಯವ ತೋರುತ ಸಾಧುಸಜ್ಜನರ ಚಿತ್ತದಿ ಹೊಳೆಯುವ ಪುತ್ಥಳಿ ಗೊಂಬೆ ॥3॥

ಸಂಖೆಯಿಲ್ಲದ ಭಾಗ್ಯವ ಕೊಟ್ಟು । ಕಂಕಣಕೈಯ್ಯ ತಿರುವುತ ಬಾರೆ ।
ಕುಂಕುಮಾಂಕಿತೆ ಪಂಕಜಲೋಚನೆ । ವೇಂಕಟರಮಣನ ಬಿಂಕದ ರಾಣಿ ॥4॥

ಸಕ್ಕರೆತುಪ್ಪದ ಕಾಲುವೆ ಹರಿಸಿ । ಶುಕ್ರವಾರದ ಪೂಜೆಯ ವೇಳಗೆ ।
ಅಕ್ಕರೆಯುಳ್ಳ ಅಳಗಿರಿರಂಗನ । ಚೊಕ್ಕಪುರಂದರವಿಠಲನ ರಾಣಿ ॥5॥

<32>

ಆವರೂಪವ ನೋಡಿ ಮರಳಾದೆ ಇಂಥ । ದೇವವರಗೆ ಹಾರ ನೀಡಿದೆ ॥ಪ॥

ಸೇವಕಜನಗಳ ಸೇವೆಗೆ ದೊರೆಯದೆ ಗೋವರ ಮನಿಮಹಾದೈವನಾದವಗೆ ॥ಅ.ಪ॥

ವೇದಚೋರನ ಕೊಂದ ಶೂರಗೆ ಭಾರ–। ವಾದ ಗಿರಿಯ ಪೊತ್ತ ಧೀರಗೆ ।
ಮೇದಿನಿ ತಂದಿಹ ವೀರಗೆ ಮಹ– । ಆದಿದೈತ್ಯರ ಕೊಂದ ಕ್ರೂರಗೆ ॥
ಬೋಧಗಾರ ಶುದ್ಧಕುಧರನುದ್ಧಾರಗೆ । ಭೂಧರ ವರಘೋರರೂಪನಾದವಗೆ ॥1॥

ಧರೆಯನಳೆದ ಅಳತಿಗಾರಗೆ ತಾಯಿ । ಶಿರವ ತರಿದ ಮೋಸಗಾರಗೆ
ಶರಧಿಗಟ್ಟಿದ ಸೇತುಗಾರಗೆ ಬಹು । ಹರದಿಯರಿಗೆ ವಿಟಗಾರಗೆ ।
ತಿರುಕರೂಪಗೆ ಪರಶುಧರ ವನಚರಗೆ । ಖರಾಸುರ ವೈರಿಗೆ ಕಂಸಮರ್ದನಗೆ ॥2॥
ವೀತವಸನ ಬಂಡಗಾರಗೆ ಬಹು । ಪಾತಕರೊಳು ಪುಂಡಗಾರಗೆ
ನೀತಸತಿವ್ರತ ಹಾರಗೆ ಖಳ-। ಜಾತಿಜನರ ಸಂಹಾರಗೆ ।
ಮಾತುಗಾರ ಬಹುಪ್ರೀತಿಗಾರ ನಮ್ಮ । ಖ್ಯಾತ ಶ್ರೀಗುರುಜಗನ್ನಾಥವಿಠಲಗೆ ॥3॥

<33>
ಭಾಗ್ಯವೇ ಪಾಲಿಸೆನಗೆ । ಶ್ರೀಭಾರ್ಗವಿ ಜನನಿ ॥ಪ॥

ಭಾಗ್ಯವೆ ಪಾಲಿಸು ಭಾರ್ಗವಿ ಕಮಲಜ-।
ಭರ್ಗಾದ್ಯನಿಮಿಷವರ್ಗಸೇವಿತೆ ॥ಅ.ಪ॥

ಹರಿಸರ್ವೋತ್ತಮ ಗುರುಸುಖತೀರ್ಥರು ।
ಹರ ಫಣಿ ವಿಪ ಶಕ್ರಾದಿಗಳು ।
ತರತಮಭೇದ ಮೂರೆರಡೆ ಸತ್ಯವೆಂ-।
ದರಿತು ಮನದಿ ಬಲು ಹರುಷಪಡುತಲಿಹ ಸೌ ॥1॥

ಕಾಮಕ್ರೋಧಗಳ ಗೆಲಿದು ಸತತ ನಿ-।
ಷ್ಕಾಮ ಭಕ್ತಿಯಲಿ ಮನವುಬ್ಬಿ ।
ರಾಮ ರಾಮ ಎಂದು ಪ್ರೇಮದಿ ಪಾಡುತ ।
ರೋಮಾಂಚಿತ ತನುವಿಲಿ ನರ್ತಿಪ ಸೌ ॥2॥

ದುರ್ಜನಸಂಗವಿವರ್ಜಿಸಿ ನಿರುತದಿ ।
ಸಜ್ಜನಸಂಗಸುಖವ ಬಯಸಿ ।
ಅರ್ಜುನಸಖನ ಪಾದಾಬ್ಜಧ್ಯಾನದೊಳು
ಗರ್ಜಿಸುತ ನಿರ್ಲಜ್ಯನೆನಿಪ ಸೌ ॥3॥

ನಾನು ನನ್ನದೆಂಬ ಹೀನಮತಿಯ ಕಳೆ-।
ದೇನುಮಾಡುತಿಹ ಕರ್ಮಗಳ ।
ಶ್ರೀನಿವಾಸನ ಪ್ರೇರಣೆ ಎಂದು ಸ-।
ದಾನುರಾಗದಲಿ ಅರ್ಪಿಸುತಿಹ ಸೌ ॥4॥

ಸೂಸುವತಭಕ್ತಿವಿರಕ್ತಿಜ್ಞಾನಧನ-।
ರಾಶಿಯ ಕೊಟ್ಟೀಭವಸುಖದ ।
ಆಸೆ ಬಿಡಿಸಿ ವರದೇಶವಿಠಲನ ।
ದಾಸರ ದಾಸರ ದಾಸನೆನಿಪ ಸೌ ॥5॥

ಐಐ

<34>
ಕರುಣದಿ ಎನ್ನ ಪೊರಯೆ ಭಾರಮ್ಮ ಶಿರಿಯೆ ॥ಪ॥

ಶರಣರ ಪೊರೆಯುವ ಕರುಣಿಯೆ ನಿನ್ನಯ ।
ಚರಣಕೆ ನಮಿಪೆ ಸುಪರಣವಾಹನರಾಣಿ ॥ಅ.ಪ॥

ವಾರಿಜಾಂಬಕೆ ಅಂಭ್ರಣಿ ಶ್ರೀಹರಿಯ ರಾಣಿ ।
ಮಾರಾರಿಮುಖಸುರಸಂತ್ರಾಣಿ ।
ವಾರವಾರಕೆ ನಿನ್ನ ಸಾರಿಭಜಿಪೆ ಎನ್ನ ।
ದೂರನೋಡದೆ ಪೋರಿಭಾರ ನಿನ್ನದು ತಾಯೆ ॥1॥

ಸೃಷ್ಟಿ-ಸ್ಥಿತಿ-ಲಯಕಾರಣಿ ಸುಗುಣಾಸನ್ಮಣಿ ।
ಕಷ್ಟದಾರಿದ್ರ್ಯದುಃಖಹಾರಿಣಿ ।
ದುಷ್ಟರ ಸಂಗದಿ ಕಟ್ಟಿಹ ಎನ್ನನು ।
ಥಟ್ಟನೆ ಕರುಣಾದೃಷ್ಟಿಲಿ ನೋಡಿ ॥2॥

ಜಾತರೂಪಳೆ ಶುಭಗಾತ್ರೆ ತ್ರಿಜಗಕೇ ಧಾತ್ರಿ ।
ಸೀತೆ ಸತ್ರಾಜಿತನಪುತ್ರಿ ।

ದಾತಗುರುಜಗನ್ನಾಥವಿಠಲನ ।
ನೀತಸತಿಯೆ ಎನ್ನ ಮಾತೆ ವಿಖ್ಯಾತೆ ॥3॥

ઈ୦ઉ

<35>
ಹೊಸಕಣ್ಣು ಎನಗೆ ಹಚ್ಚಲಿಬೇಕು ಜಗದಂಬಾ । ವಸುದೇವ ಸುತನ ಕಾಂಬುದಕೆ ॥ಪ॥
ಘಸಣೆಯಾಗಿದೆ ಭವವಿಷಯವಾರಿಧಿಯೊಳು । ಶಶಿಮುಖಿ ಕರುಣದಿ ಕಾಯೇ ॥ಅ.ಪ॥

ಪರರ ಅನ್ನವನುಂಡು ಪರರ ಧನವ ಕಂಡು । ಪರಿಪರಿಕ್ಲೇಶಗಳುಂಡು ।
ವರಲಕ್ಷ್ಮೀ ನಿನ್ನ ಚಾರುಚರಣವ ಮೊರೆಹೊಕ್ಕೆ । ಕರುಣದಿ ಕಣ್ಣೆತ್ತಿ ನೋಡೇ ॥1॥

ಮಂದುಹಾಸಿನಿ ಭವಸಿಂಧುವಿನೊಳಗಿಟ್ಟು । ಛಂದವೇ ಅಮ್ಮ ನೋಡುವದು ।
ಕಂದನೆಂತೆಂದೆನ್ನ ಕುಂದುಗಳೆಣಿಸದೆ । ಮಂದರೋದರನ ತೋರಮ್ಮ ॥2॥

ಅಂದಚಂದಗಳೊಲ್ಲೆ ಬಂಧು ಬಳಗವೊಲ್ಲೆ । ಬಂಧನಕ್ಕೆಲ್ಲ ಕಾರಣವು ।
ಇಂದಿರೇಶನ ಪಾದದ್ವಂದ್ವವ ತೋರಿ । ಹೃನ್ಮಂದಿರದೊಳು ಬಂದು ನಿಲ್ಲೆ ॥3॥

ઈ୦ઉ

# ವಾಯು ಲೀಲಾವಿಲಾಸ ಸ್ತುತಿ

<36>
ಸಾರಿಬಂದನೆ ಪ್ರಾಣೇಶ ಬಂದನೆ ॥ಪ॥

ಸಾರಿಬಂದು ಲಂಕಾಪುರದ ಮೀರಿದ ರಾವಣನ ಕಂಡು
ಧೀರನು ವಯ್ಯಾರದಿಂದ ॥ಅ.ಪ॥

ವಾಯುಪುತ್ರನೇ ಶ್ರೀರಾಮದೂತನೆ
ಪ್ರೀತಿಯಿಂದ ಸೀತಾಂಗನೆಗೆ ಮುದ್ರಿಕೆಯ ತಂದಿತ್ತವನೆ ॥1॥

ಭೀಮಸೇನನೇ ಕುಂತಿತನಯನೇ ।
ವಿರಾಟನ ಮನೆಯಲಿನಿಂತು ಕೀಚಕನ ಸಂಹರಿಸಿದವನೆ ॥2॥

ಮಧ್ವರಾಯನೇ ಸರ್ವಜ್ಞ ಶ್ರೇಷ್ಠನೇ ।
ಅದ್ವೈತವ ಗೆದ್ದು ಪುರಂದರವಿಠಲನ ಮುಂದೆ ನಿಂತವನೆ ॥3॥

<37>
ಧೀರನ ನೋಡಿರೈ । ಕರುಣಾಪೂರನ ಪಾಡಿರೈ ॥ಪ॥

ವಾರಿಜವದನ ಸಮೀರಜಕಪಿನೃಪ, ದ್ವಿಜನ ಭಾವಿಅಜನ ॥ಪ॥

ಕಣಕಾಲಂದಿಗೆ ಒಪ್ಪುವ ಸರ, ಕಂಠಮಣಿಯ–ವಜ್ರದ ಖಣಿಯ
ದಣಿಯದೆ ಬಹಳ ಕಠಿಣ ದಿತಿಜರನೆಲ್ಲ ಹಣಿಯಬೇಕೆಂಬ ಧಣಿಯ
ಪ್ರಣತಿಸಿ ನಾರಾಯಣ ಪದ ಭಕ್ತಾ ಗ್ರಣಿಯ, ಚಿಂತಾಮಣಿಯ
ತೃಣೀಕೃತಮರಪತಿವಿಶೋ ಮಾಧವ ಪ್ರಣಿಯ ಕಪಿಶಿರೋಮಣಿಯ ॥1॥

ಮಂದಸ್ಮಿತಯುತ ಕುಂದಕುಟ್ಮಲಸಮರದನ ಪೂರ್ಣಚಂದ್ರವದನ
ಇಂದುಧರಾದಿಸುರವೃಂದವಂದಿತ ಪದಯುಗನ ಹಸ್ತಾಯುಧನ
ಬಂದೀಕೃತಾಮರ ಸುಂದರ ಸಮುದಯ ಸದನ ಜಿತಾನೇಕಮದನ
ಮಂದಮತಿ ಜರಾಸಂಧನಂಗವ ಸೀಳಿದನ ಬಹು ಬಲ್ಲಿದನ ॥2॥

ಮುದ್ದುಮುಖವ ನೋಡಿ ಮಾಡಿದ ಮೈಸಿರಿಯ ಈನಮ್ಮ ದೊರೆಯ
ಒದ್ದಕ್ಷಕುವರನ ಗುದ್ದಿಬಿಸುಟ ಹೊಂತಕಾರಿಯ ಭಾರತಿ ದೊರೆಯ
ಶುದ್ಧಾನಂದಸಮುದ್ರ ಶ್ರೀಕೃಷ್ಣಗೆ ಕಿರಿಯ ಮಿಕ್ಕ ಜಗಖಿರಿಯ
ಅದ್ವೈತಶಾಸ್ತ್ರದ ಸದ್ದಡಗಿಸಿದ ಆರ್ಯಾ ನಮ್ಮ ಮಧ್ವಾಚಾರ್ಯಾ ॥3॥

<38>
ನಮೋ ನಮೋ ಹನುಮಾ ಪ್ಲವಗೋತ್ತಮಾಂಜನೇಯನಾಮಾ ॥ಪ॥

ಶಮಾದಿಗುಣಗಣಸಮೀರ ನುತಜನ ।
ಪ್ರಮಾದ ಹರಿಸೆಲೋ ಉಮೇಶವಂದ್ಯನೆ ॥ಅ.ಪ॥

ದಶಾಪುರುಷ ನೀನೇ ತ್ರೀ–। ದಶಾದ್ಯಮರಪೂಜಿತ ।
ದಶಾಸ್ಯಮುಖಮಹಾನಿಶಾಚರೇಶರ ।
ದಶಾಕಳದು ಈ ವಸೂಧಿಯೊಳು ಮೆರೆದೆ ॥1॥

ಬಕಾಸುರಗೆ ವೈರೀ ನಿನ್ನ । ಭಕೂತ ಜನಕೀಪರಿ ।
ಅಖಿಳಸೌಖ್ಯದ ಲಕೂಮಿರಮಣನ ।
ಭಕೂತಿಪೂರ್ವಕ ಮೂಕೂತಿದಾಯಕ ॥2॥

ಯತಿಶಕುಲನಾಥಾ ದಶ-। ಮತೀನಾಮ ಖ್ಯಾತಾ ।
ಕ್ಷಿತೀಶಗುರುಜಗನ್ನಾಥಾವಿಠಲದೂತ ।
ಪಾಥೋಜಜಾಂಡಕೆ ನಾಥನೆ ಪಾಲಿಸೋ ॥3॥

ಌ

<39>
ಶರಣು ನಿನ್ನ ಚರಣಗಳಿಗೆ ಭಾರತೀಶನೆ ।
ಕರವ ಪಿಡಿದು ಸಲಹೊ ಬಿಡದೆ ಭಾರತೀಶನೆ ॥

ಎಲ್ಲ ಕಡೆಗೆ ವ್ಯಾಪ್ತ ನೀನೆ ಭಾರತೀಶನೆ ।
ಅಲ್ಲಿ ವಿಷವ ಕುಡಿದೆ ಅಂದು ಭಾರತೀಶನೆ ।
ಗೆಲ್ಲಿಸಿದೆಯೊ ಸರ್ವಸುರರ ಭಾರತೀಶನೆ ।
ಬಲ್ಲಿದನು ನಿನಗೆಣೆಯಾರೋ ಭಾರತೀಶನೆ ॥1॥

ಅಂಜನಾಕುಮಾರನಾಗಿ ಭಾರತೀಶನೆ ।
ಕಂಜನಾಭನಂಘ್ರಿಭಜಿಸಿ ಭಾರತೀಶನೆ ।
ಅಂಜದುದಧಿದಾಟಿಪೋಗಿ ಭಾರತೀಶನೆ ।
ಸಂಜಿಚರರ ಸಂಹರಿಸಿದೆಯೊ ಭಾರತೀಶನೆ ॥2॥

ಕುಂತಿಜಠರದಿಂದ ಜನಿಸಿ ಭಾರತೀಶನೆ ।
ಹಂತಕೌರವರ ತರಿದೆ ಭಾರತೀಶನೆ ।
ಕಂತುಪಿತನ ಕರುಣಪಡೆದೆ ಭಾರತೀಶನೆ ।
ಅಂತುಗಾಣೆ ನಿನ್ನ ಮಹಿಮೆಗೆ ಭಾರತೀಶನೆ ॥3॥

ಯತಿಯ ರೂಪ ಇಳೆಯೊಳಾಗಿ ಭಾರತೀಶನೆ ।
ಮತಿಯ ಸರ್ವಬುಧರಿಗಿತ್ತೆ ಭಾರತೀಶನೆ ।
ಸತತ ನಿನ್ನ ಪೂಜಿಪರಿಗೆ ಭಾರತೀಶನೆ ।

ಗತಿಯ ಕೊಡುವೆ ದೋಷಕಳೆದು ಭಾರತೀಶನೆ ॥4॥

ಘನ್ನಪ್ರಾಣೇಶವಿಠಲನಾಳೆ ಭಾರತೀಶನೆ ।
ಭಿನ್ನಪವ ಲಾಲಿಸುವುದು ಭಾರತೀಶನೆ ।
ನಿನ್ನ ದಾಸನೆನಿಸಬೇಕೊ ಭಾರತೀಶನೆ ।
ಅನ್ಯವಿಷಯನೊಂದನೊಲ್ಲೆ ಭಾರತೀಶನೆ ॥5॥

ꗃ

<40>
ಭಾರತೀಶನಿಗೆ ನಮೋ ನಮೋ । ಭಾರವ ಪೊತ್ತಗೆ ನಮೋ ನಮೋ ।
ಚಾರುಚರಿತಶ್ರೀರಾಮನಾಮವ । ಸಾರುವ ಭಕುತಗೆ ನಮೋ ನಮೋ ॥ಪ॥

ಅಂಜನಿಪುತ್ರಗೆ ನಮೋ ನಮೋ । ಮಂಜುಳಗಾತ್ರಗೆ ನಮೋ ನಮೋ ।
ಕಂಜಾಕ್ಷಿಯ ಪದಕಂಜಕೆರಗಿ ವನ-। ಭಂಜಕ ಹನುಮಗೆ ನಮೋ ನಮೋ ॥1॥

ಕುಂತಿಆತ್ಮಜಗೆ ನಮೋ ನಮೋ । ಸಂತಸಪ್ರೀಯಗೆ ನಮೋ ನಮೋ ।
ಹಂತಕೌರವರ ಅಂತಕರ್ತ ಬಲ-। ವಂತ ಭೀಮನಿಗೆ ನಮೋ ನಮೋ ॥2॥

ಮಧ್ಯಗೇಹಜಗೆ ನಮೋ ನಮೋ । ಮುದ್ದುಮುನಿವರಗೆ ನಮೋ ನಮೋ ।
ಅದ್ವೈತಶಾಸ್ತ್ರವಪದ್ಧಗೈದ ಗುರು-। ಮಧ್ವರಾಯರಿಗೆ ನಮೋ ನಮೋ ॥3॥

ಲೋಕಪೂಜ್ಯನಿಗೆ ನಮೋ ನಮೋ । ಭೀಕರರೂಪಗೆ ನಮೋ ನಮೋ ।
ಏಕವಿಂಶತಿಶುಭಾಷ್ಯವ ಖಂಡಿಸಿ । ಶೇಖರ ಮಾಡ್ದಗೆ ನಮೋ ನಮೋ ॥4॥

ಹರಿಯ ರೂಪಗೆ ನಮೋ ನಮೋ । ದುರುಳಶಿಕ್ಷಕಗೆ ನಮೋ ನಮೋ ।
ವರದೇಂದ್ರವಿಠಲನ ಧ್ಯಾನಮಾಡುವ । ಹರುಷತೀರ್ಥರಿಗೆ ನಮೋ ನಮೋ ॥5॥

ꗃ

<41>
ಮುದ್ದುಮುಖದಾತ ನಮ್ಮ ಮುಖ್ಯಪ್ರಾಣನಾಥನೊ
ಸದ್ಗುಣ ಖ್ಯಾತನೊ ವಾಯುಜಾತನೊ ರಾಮದೂತನೊ ॥ಪ॥

ಜಾನಕೀಶನ ದಾಸ ಶೂರನೋ ಬಹು ಧೀರನೊ
ಮಾನಿನಿಸೀತೆಯ ಕಂಡು ಬಂದನೊ ಮುಂದೆ ನಿಂದನೊ ॥1॥

ವಾನರರೂಪದಲಿ ಮುದ್ರೆಯಿತ್ತನೊ ವನ ಕಿತ್ತನೊ
ಆ ನಗರವನೆಲ್ಲ ಸುಟ್ಟನೊ ಬಹು ದಿಟ್ಟನೊ ॥2॥

ಸಾಗರವನು ದಾಟಿದ ಧೀರನೊ ಗಂಭೀರನೋ
ರಾಗ ತಾಳ ಮೇಳದಲ್ಲಿ ಜಾಣನೊ ಪ್ರವೀಣನೊ ॥3॥

ನಂಬಿದ ಭಕ್ತರ ಕಾಯ್ವ ದಾತನೊ ದಾತನೊ ಪ್ರಖ್ಯಾತನೊ
ಅಂಬುಜಾಸನಪದಕೆ ಬಂದು ನಿಂತನೊ ಹನುಮಂತನೊ ॥4॥

ಹಯವದನನ ಭಕ್ತ ಚೆಲ್ವ ತೇಜನೊ ತೇಜನೋ ಯತಿರಾಜನೊ
ದಾನವಕುಲಕೆ ಬಹು ಭೀಮನೊ ಸಾರ್ವಭೌಮನೊ ॥5॥

<42>
ಎಂಥಾ ಬಲವಂತನೋ ಭಾರತೀಕಾಂತಾ । ಎಂಥಾ ದಯವಂತನೊ ॥ಪ॥

ಎಂಥ ಮಹಬಲವಂತ ಬಹುಗುಣ-। ವಂತ ಸರ್ವದಾನಂತಚೇತನ-।
ರಂತರಾದೋಳ್ನಿಂತು ಪ್ರೇರಿಪ-। ನಂತುಮಹಿಮೆಯ ಅಂತು ತಿಳಿಯದೊ ॥ಅ.ಪ॥

ವೀರರಾಘವನಂಘ್ರಿಯ ಭಜಿಸಿ ಕಪಿ–। ವೀರನಾದನು ಮಹರಾಯಾ ।
ವಾರಿಧಿಯಾಗಾಧತೋಯ ಲಂಘಿಸಿ ಲಂಕಾ । ಸಾರಿ ಪೇಳಿದ ವಾರ್ತೆಯ ।
ವೀರ ವನವನಂಗಾರಮುಖಕೆ ಇತ್ತು । ವೀರಾಕ್ಷನೆನಿಪ ಕುಮಾರನ ದಂಡಿಸಿ ।
ಸಾರಿ ಉಂಗುರವಿತ್ತು ಮತ್ತೆ । ಹಾರಿ ವಾರಿಧಿ ವಾನರೇಶನು ।
ತೋರಿ ರಾಮನ ಪದಕೆ ನಮಿಸಿ । ಚಾರು ರಾಗಟೆ ಇತ್ತ ತ್ವರದಿ ॥1॥

ದುರಳದುಶ್ಯಾಸನನೂ ಕೋಪದಿ ತಾ । ತರುಳೆ ದ್ರೌಪದಿಯನು ।
ಶರಗು ಪಿಡಿದು ಶಳದಾನು ಕರಿಯಲು ಬ್ಯಾಗ । ಹರಿ ತಾನಂಬರವಿತ್ತನು ।
ಧುರದಿ ಭೀಮನು ನಿನ್ನ ತರಿದರಕ್ತದಿ ನಾನು । ಬೆರೆಸಿ ಕೇಶವ ಕಟ್ಟಿ
ಕರುಳದಂಡೆಯನ್ನಿಟ್ಟು ।
ಮೆರೆವೆ ಕೇಳೆಲೊ ದುರುಳನೆಂದಾ–। ತರುಣಿವಚನವ ಸ್ಥಿರವ ಮಾಡಿದ ।
ಧರಿಯತಳದಲಿ ಸರಿಯುಗಾಣೆನೊ । ವರವೃಕೋದರ ಪರಮ ಕರುಣಿಯೆ ॥2॥

ಭೂತೇಶಸರ್ವೋತ್ತುಮಾನೆಂಬುವೊ ಮಹಾ–। ಪಾತಕಿಜನಮಾತನೇಮ ।
ಈತ ಮಾಡಿದ ನಿರ್ಧೂಮ ಹರಿಗೆ ಶಿವ । ದೂತಜನರಿಗುತ್ತುಮ ।
ಭೂತಳದಲಿ ತಾನೆ ಜಾತನಾಗಿ ಮಧ್ವ । ಖ್ಯಾತಿ ಮಾಡಿದ ಜೀವಜಾತಿಪ್ರೇರಕನಾಗಿ ।
ಶ್ವೇತವಾಹನದೂತನಾಗಿಹ । ನಾಥಗುರುಜಗನ್ನಾಥವಿಠಲ ।
ಧಾತನಾಂಡಕೆ ನಾಥ, ನಿರ್ಜರ । ನಾಥರೆಲ್ಲರು ದೂತರೆಂದರು ॥3॥

ജ്ഞ

<43>
ಆನಂದತೀರ್ಥರೆಂಬೊ ಅರ್ಥಿಯ ಪೆಸರುಳ್ಳ । ಗುರು ಮಧ್ವಮುನಿರಾಯ ।
ಏನೆಂಬೆ ನಾ ನಿಮ್ಮ ಕರುಣಕ್ಕೆ ಎಣೆಗಾಣೆ ॥ಪ॥

ಅಂದು ಹನುಮಂತನಾಗಿ ಬಂದ ಸುಗ್ರೀವಗೆ ಗುರುಮಧ್ವಮುನಿರಾಯ ।
ಛಂದದಿಂದ ಪದವಿತ್ತಾನಂದದಿಂದ ಸಲಹಿದ್ಯೊ ಗುರುಮಧ್ವಮುನಿರಾಯ ॥1॥

ಕುಂತಿಯ ಕುಮಾರನಾಗಿ ಹಂತಕೌರವರ ತರಿದ್ಯೋ ಗುರುಮಧ್ವಮುನಿರಾಯ ।
ಅಂತುಪುಣ್ಯಗಳನೆಲ್ಲ ಕಂತುಪಿತಗರ್ಪಿಸಿದ್ಯೋ ಗುರುಮಧ್ವಮುನಿರಾಯ ॥2॥

ಅದ್ವೈತರನ್ನು ಕಾದು ಗೆದ್ದು ನಿನ್ನ ಭಕ್ತರಿಗೆ ಗುರುಮಧ್ವಮುನಿರಾಯ ।
ಶುದ್ಧತಾತ್ಪರ್ಯವಾಕ್ಯಪದ್ಧತಿಯ ತಿಳಿಸಿದ್ಯೋ ಗುರುಮಧ್ವಮುನಿರಾಯ ॥3॥

ಬೆಸರದೆ ಸರ್ವರಲ್ಲಿ ಶ್ವಾಸಜಪಗಳ ಮಾಡಿ ಗುರುಮಧ್ವಮುನಿರಾಯ ।
ಶ್ರೀಶಗರ್ಪಿಸುತ ಹರಿದಾಸರನ್ನು ಸಲಹಿದ್ಯೋ ಗುರುಮಧ್ವಮುನಿರಾಯ ॥4॥

ಗುರುಪ್ರಾಣೇಶವಿಠಲ ಪರನೆಂದು ಡಂಗುರವ ಗುರುಮಧ್ವಮುನಿರಾಯ ।
ಸಾರೀ ಸಜ್ಜನರನ್ನು ಹರಿಯಲೋಕ ಸೇರಿಸಿದ್ಯೋ ಗುರುಮಧ್ವಮುನಿರಾಯ ॥5॥

<44>
ಪ್ರಾಣದೇವ ನೀನಲ್ಲದೇ ಕಾಯ್ವ ಕಾಣೆನು ಲೋಕದೊಳಗೆ ॥ಪ॥
ಪ್ರಾಣ ಅಪಾನ ವ್ಯಾನೋದಾನ ಸಮಾನನೆನಿಪ ಮುಖ್ಯಪ್ರಾಣ ॥ಅ.ಪ॥

ವಾಸವ ಕುಲಿಶದಿ ಘಾಸಿಸೆ ಜೀವರ ಶ್ವಾಸ ನಿರೋಧಿಸಿದೆ ।
ಆ ಸಮಯದಿ ಕಮಲಾಸನ ಪೇಳಲು ನೀ ಸಲಹಿದಿ ಜಗವ ॥1॥

ಅಂಗದ ಪ್ರಮುಖ ಪ್ಲವಂಗರು ರಾಮನ ಅಂಗನೆಯಳ ಹುಡುಕೆ ।
ತಿಂಗಳು ಮೀರಲು ಕೆಂಗೆಡೆ ಕಪಿಗಳ ಜಂಗುಳಿ ಪಾಲಿಸಿದೆ ॥2॥

ಪಾಪಿನ ಪಾಶದಿ ರಾವಣಿನೀಲ ಸುಗ್ರೀವರ ಮುಖ ಬಿಗಿಯೇ ।
ಸಾವಿರದೈವತ್ತು ಗಾವುದದಲ್ಲಿಹ ಸಂಜೀವನ ಜವದಿ ತಂದಿತ್ತೇ ॥3॥

ಪರಿಸರ ನೀನಿರೆ ಹರಿ ತಾ ನಿಪ್ಪನು ಇರದಿರೆ ತಾನಿರನು ।
ಶರಣ ನಿಯಾಮಕ ಸುರರ ಗುರುವೇ ನೀ, ಕರುಣಿಸೆ ಕರುಣಿಸುವ ॥4॥

ಭೂತೇಂದ್ರಿಯಂಗಳಧಿನಾಥ ನಿಯಾಮಕ ನಾತೈಜಸಹರನ ।
ತಾತನೇನಿಪ ಜಗನ್ನಾಥ ವಿಠಲನ ಪ್ರೀತಿ ಪಾತ್ರನಾದೇ ॥5॥

ೞೞ

<45>
ಪವಮಾನ ಜಗದ ಪ್ರಾಣ  ಸಂಕರುಷಣ–।
ಭವನೆ ಭವಾರಣ್ಯದಹನ ಪವನ ॥ಪ॥

ಶ್ರವಣವೆ ಮೊದಲಾದ ನವವಿಧಭಕುತಿಯ
ತವಕದಿಂದಲಿ ಕೊಡು ಕವಿಗಳ ಪ್ರಿಯ ॥ಅ.ಪ॥

ಹೇಮಕಚ್ಚೂತ ಉಪವೀತ–ಧರಿಪ ಮಾರುತ
ಕಾಮಾದಿವರ್ಗರಹಿತ
ವ್ಯೋಮಾದಿ ಸರ್ವವ್ಯಾಪುತ–ಸತತ ನಿರ್ಭಿತ
ರಾಮಚಂದ್ರನ ನಿಜದೂತ
ಯಾಮಯಾಮಕೆ ನಿನ್ನಾರಾಧಿಪುದಕೆ
ಕಾಮಿಪೆ ಎನಗಿದನೇಮಿಸಿ ಪ್ರತಿದಿನ
ಈ ಮನಸಿಗ ಸುಖಸ್ತೋಮವ ತೋರುತ
ಪಾಮರಮತಿಯನು ನೀ ಮಾಣಿಪುದು ॥1॥

ವಜ್ರಶರೀರ ಗಂಭೀರ–ಮಕುಟಧರ
ದುರ್ಜನವನಕುಠಾರ
ನಿರ್ಜರಮಣಿ ದಯಾಪಾರಾವಾರ ಉದಾರ
ಸಜ್ಜನರಘಪರಿಹಾರ
ಅರ್ಜುನಗೊಲಿದಂದು ಧ್ವಜವಾನಿಸಿ ನಿಂದು
ಮೂರ್ಜಗವರಿವಂತೆ ಗರ್ಜನೆಮಾಡಿದೆ

ಹೆಜ್ಜೆ ಹೆಜ್ಜೆಗೆ ನಿನ್ನ ಅಬ್ಜಪಾದದ ಧೂಳಿ–
ಮಾಜ್ಜನದಲಿ ಭವವರ್ಜಿತನೆನಿಸೊ ॥2॥

ಪ್ರಾಣ ಅಪಾನ ಉದಾನ– ವ್ಯಾನ ಸಮಾನ
ಆನಂದ ಭಾರತೀರಮಣ
ನೀನೆ ಶರ್ವಾದಿಗೀರ್ವಾಣಾದ್ಯಮರರಿಗೆ ಜ್ಞಾನ
ಧನಪಾಲಿಪ ವರೇಣ್ಯ
ನಾನು ನಿರುತದಲಿ ಏನೇನೆಸಗಿದ
ಮಾನಸಾದಿಕರ್ಮ ನಿನಗೊಪ್ಪಿಸಿದೆನೊ
ಪ್ರಾಣನಾಥ ಶ್ರೀವಿಜಯವಿಠ್ಠಲನ
ಕಾಣಿಸಿ ಕೊಡುವುದು ಭಾನುಪ್ರಕಾಶ ॥3॥

✿✿

<46>
ವೀರಹನುಮ ಬಹುಪರಾಕ್ರಮ ಸುಜ್ಞಾನವಿತ್ತು ಪಾಲಿಸಯ್ಯ ಜೀವರುತ್ತಮ ॥ಪ॥

ರಾಮದೂತನೆನಿಸಿಕೊಂಡು ನೀ ರಾಕ್ಷಸರ ವನವನೆಲ್ಲ ಕಿತ್ತು ಬಂದೆ ನೀ
ಜಾನಕಿಗೆ ಉಂಗುರವಿತ್ತು ಜಗತಿಗೆಲ್ಲ ಹರುಷವಿತ್ತು ಚೂಡಾ–।
ಮಣಿಯ ರಾಮಗಿತ್ತು ಲೋಕದಿ ಪ್ರಖ್ಯಾತನಾದೆ ॥1॥

ಗೋಪಿಸುತನ ಪಾದಪೂಜಿಸಿ ಗದೆಯ ಧರಿಸಿ ಕೌರವರ ಬಲವ ಸವರಿಸಿದೆ
ದ್ರೌಪದಿಯ ಮೊರೆಯ ಕೇಳಿ ಕರುಣದಿಂದ ತ್ವರದಿ ಬಂದು
ಪಾಪಿ ಕೀಚಕನನು ಕೊಂದು ಭೀಮಸೇನನೆನಿಸಿಕೊಂಡೆ ॥2॥

ಮಧ್ಯಗೇಹನಲಿ ಜನಿಸಿ ನೀ ಬಾಲ್ಯದಲ್ಲಿ ಮಸ್ಕರಿಯ ರೂಪಗೊಂಡೆ ನೀ
ಸತ್ಯವತಿಯ ಸುತನ ಭಜಿಸಿ ಸನ್ಮುಖದಲಿ ಭಾಷ್ಯ ಮಾಡಿ
ಸಜ್ಜನರ ಪಾಲಿಸಿದ ಮುದ್ದು ಪುರಂದರವಿಠಲನ ದಾಸ ॥3॥

✿✿

<47>
ಯತಿಕುಲಾಂಬುಜನಿಜತರಣಿ । ಸದಾ ನುತಿಪ ಸುಜನರಿಗೆ ದೊರೆವೋನು ಕರುಣಿ ॥ಪ॥

ಕ್ಷಿತಿಯೊಳಗೆ ಮಣಿಮಂತ ಮೊದಲಾ-। ದತಿದುರಾತ್ಮರ ತತಿಯ ಖಂಡ್ರಿಸಿ ।
ವಿತತನಿಜಹರಿಮತವ ಸ್ಥಾಪಿಸಿ-। ದತುಳಮಹಿಮನ ಸತತ ಸ್ಮರಿಸುವೆ ॥ಅ.ಪ॥

ಹನುಮ ಭೀಮ ಮಧ್ವರಾಯನೆಂದು । ತನುತ್ರಯದಿಂದಲಿ ಜನಿಸಿದ, ತೋಯ-।
ತನುಜಸಂಭವದೇವಿ ಕಾಯ ನೋಡಿ । ದನುಜಕೌರವರ ಕೊಂದನು ಭೀಮರಾಯ ।
ದಿನಕರ್ವಂಶಜ ಪಾದಕಮಲಕೆ । ಹನುಮ ಭಾಸ್ಕರನೆನಿಪ, ಭೀಮನು ।
ಮನದಿ ಕೃಷ್ಣನ ಭಜಿಪ, ವ್ಯಾಸರ । ಅಣುಗನೆನಿಸುತ ಘನದಿ ಮೆರೆದನು ॥1॥

ರಾವಣಿಹಂತಕಹನುಮ ನೆನಿಸಿ । ಶೈವರಾಗ್ರಣಿಜರಾಸಂಧಾರಿಭೀಮ ।
ಪಾವನಾತ್ಮಕ ಮಧ್ವನಾಮ, ನಾನೆ । ದೇವರೆಂತೆಂಬೊ ಸಂಕರನ ನಿರ್ಧೂಮ ।
ದೇವನನುಜಗೆ ಜೀವನಿತ್ತನು । ದೇವಿಮೊರೆಯನು ಕೇಳಿ ಕುರುಗಳ ।
ಜೀವಹನನವ ಗೈದ ಭೀಮನು । ಶೈವಶಾಸ್ತ್ರವ ಮುರಿದ ಮಧ್ವನು ॥2॥

ಜಗಕೆ ಜೀವನನೆನಿಪ ಪ್ರಾಣದೇವ । ನಗವೈರಿಮಗನಿಗೆ ನಿರುತಸಂತ್ರಾಣ ।
ಬಗೆ ಬಗೆ ವಿಧದ ಪ್ರಮಾಣದಿಂದ । ಜಗದಿ ಮೆರೆದ ಪದವಾಕ್ಯಪ್ರವೀಣ ।
ಮುಗಿವೆ ಹಸ್ತದ್ವಯವ ಶಾಖಾ । ಮೃಗ, ನರಾಧಿಪ, ನಿಗಮನಿರ್ಣಯ,-।
ಜಗಕೆ ಗುರುಜಗನ್ನಾಥವಿಠಲನು ನಿಗಮವಾಕ್ಯದಿ ನಗುತ ಪೇಳಿದ ॥3॥

ಓಂ

<48>
ಪೂರ್ಣಬೌಧಮುನಿರಾಯಾ ಎನ್ನಲಿ ಕರುಣವ ಮಾಡಯ್ಯಾ ॥ಪ॥

ಚರಣವ ನಂಬಿದ ತರುಣನ ಭವ-। ಅರಣವ ದಾಟಿಸಿ ಶರಣನ ಪೊರೆಯೊ ॥ಅ.ಪ॥

ನಿನ್ನ ಮತದಿ ದೀಕ್ಷಾ ಪೊಂದಿಸಿ । ನಿನ್ನ ಕರಣಕಟಾಕ್ಷ ।
ನಿನ್ನ ಶಾಸ್ತ್ರದಿ ಅನನ್ಯಭಾವವ । ಮನ್ನಿಸೊ ದಿನದಿನ ಎನ್ನೊಳು ನೆಲೆಸಿದ್ದು ॥1॥

ಪಂಚಬೇದಮತಿಯಾ ತರತಮ । ಪಂಚಕಭಾವದ ಪರಿಯಾ–।
ವಂಚನೆ ಮಾಡದೆ ಪಂಚಿಕಿ ತಿಳಿಸೆಲೋ । ಮುಂಚಿಗೆ ಮರುತವಿರಿಂಚಿಯಾಗುವಿ ನೀ ॥2॥

ಮಾತರಿಶ್ವ ಹನುಮಾ ಭೀಮಾ । ಯತಿನಾಥ ಮಧ್ವನಾಮಾ ।
ಖ್ಯಾತಮಾಯಿಮತವ್ರಾತವನಳಿದ । ದಾತಗುರುಜಗನ್ನಾಥವಿಠಲಪ್ರಿಯ ॥3॥

ஐஜ

<49>
ಪಾಲಯ ಮಾಂ ಪವಮಾನಾ ಪವಮಾನಾ
ಪಾಲಯ ಮಾಂ ಕರುಣಾಲಯ ಹರಿಪದಕೀಲಾಲಜ ಮಧುಪಾ ॥ಪ॥

ಪ್ರಾಣ ಅಪಾನ ವ್ಯಾನ ಉದಾನ ಸಮಾನ ಪೂರ್ಣಜ್ಞಾನ
ನೀನೊಲಿದೆನ್ನ ಸದಾನುರಾಗದಲಿ ಮಾಣದೆ ಪೊರೆಯನ್ನು ॥1॥

ಹರಿಸುತ ಹರಪಿತ ಚರಾಚರಸ್ಥಿತ ಶರಣಜನರದಾತಾ
ಹರಿಯಾಜ್ಞಾದಿ ಜೀವರಿಗೆ ತುದಿಯಲಿ ಅವರವರ ಗತಿಪ್ರದಾತಾ ॥2॥

ಮುದ್ದುಅಭಿನವಜನಾರ್ದನವಿಠಲನ ಪಾದಪದ್ಮಯುಗಳಾ
ಶುದ್ಧಭಕುತಿಯಲ್ಲಿ ಪೊದ್ದಿಸುಖಿಪತೆರ ಉದ್ಧರಿಸುವದೆನ್ನಾ ಪವಮಾನ ॥3॥

ஐஜ

<50>
ಸಂಜೀವರಾಯ ಪೊರೆವುದು । ಆಂಜನೇಯ ಭವಭಂಜನ ಭಯಹರ ॥ಪ॥

ಶ್ರೀರಘುವರನಾಜ್ಞೆಯಿಂ ವಾರಿಧಿಯನು ಲಂಘಿಸಿ
ಸಾರಿ ಕುಶಲ ವೈದೇಹಿಗರುಹಿ
ಕ್ರೂರರಾವಣನ ಪುರವನುರುಹಿದಾತ ॥1॥

ಗೋಪತಿಕುಲದೀಪಕಾ ದ್ರೌಪದಿಮನೋನಾಯಕ
ಕೋಪದಿಂದ ಸಂಗ್ರಾಮಮಂಡಲದಿ
ಪಾಪಾತ್ಮಕ ಭೂಪಾಲರನಳಿದ ಗುರು ॥2॥

ಈ ಮಹಾಕಲಿಕಾಲದಿ ನೀ ಮುದಮುನಿನಾಮದಿ
ಸ್ವಾಮಿ ಶಾಮಸುಂದರನೆ ಎಂದು ಘನ–।
ಭೂಮಿಯಲ್ಲಿ ಡಂಗುರವ ಸಾರಿದ ॥3॥

ꕥ

<51>
ಹನುಮಾನ್ ಕೀ ಜೈ ಜೈ ಜೈ ಹನುಮಾನ್ ಕೀ ಜೈ
ಹನುಮಾನ್ ಕೀ ಜೈ ಜೈ ಜೈ ಹನುಮಾನ್ ॥ಪ॥

ಥೈ ಥೈ ಥೈ ಥೈ ಥೈಥಕ ಥೈಥಕ । ತಕಿಟ ತಕಿಟ ತಕ ಜೈ ಹನುಮಾನ್ ॥ ಅ.ಪ॥

ಹರಿಸರ್ವೋತ್ತಮನೆಂಬುವ ತತ್ವಕೆ ಜಯ । ಭೇರಿಯ ಹೊಡೆದೆಯೊ ಹನುಮಾ ।
ಡಣ ಢಣ ಢಣ ಢಣ ಢಣ ಢಣ । ಢಣ ಜಯಭೇರಿಯ ನಾದವು ಕೇಳುತಿದೆ ॥1॥

ವೈಷ್ಣವತತ್ವಗಳನು ಬೋಧಿಸಿ ಜಯ । ಭೇರಿಯ ಹೊಡೆದೆಯೊ ಬಲಭೀಮ ।
ಢಣ ಢಣ ಢಣ ಢಣ ಢಣ । ಢಣ ಜಯಭೇರಿಯ ನಾದವು ಕೇಳುತಿದೆ ॥2॥

ಆಂದಿನನಾದವು ಇಂದು ನುಡಿಯುತಿದೆ । ಮಂದಿಗಳೆಲ್ಲರು ಕೇಳುವರು ।
ತಂದೆಪ್ರಸನ್ನನ ಮಂದಿರದಲಿ ಇದು । ಎಂದೆಂದಿಗೂ ಶಾಶ್ವತವಿರಲಿ ॥3॥

ꕥ

<52>
ಭಾರತಿರಮಣ  ನಾ ಸಾರುವೆ ಚರಣ
ತೋರೊ ಮನ್ಮನದಲಿ ಭೂರಿಸುಕರುಣ ॥ಪ॥

ನಾರಾಯಣಾಂಕದಿ ಕುಳಿತಿಹ ಶೂರ
ಸೂರಿಸ್ತೋಮತೇಜರಂಜಿಪುದುದಾರ ।
ಮಾರಮಣನಾಜ್ಞದಿಂ ಬ್ರಹ್ಮಾಂಡಾಧಾರ
ಧಾರಕಾನಂದವಿಠಲನ್ನ ಚಾರ ॥1॥

ದುರುಳರಕ್ಕಸತತಿದ್ವಿರದವಿದಾರ
ಹರಿರಘುವರನ ಪಾದಶರಧಿಜಚಕೋರ ।
ಹರಮುಖ್ಯಸುರಸರಸೀರುಹಕೆ ದಿನಕರ
ವರದೇಶವಿಠಲನ್ನ ಸ್ಮರಿಪ ಸಮೀರ ॥2॥

ಕುರುಕುಲಸಂಜಾತ ದ್ರುಪದಜಾನಾಥ
ದುರಿಯೋಧನನ ಊರು ತರಿದ ನಿರ್ಭೀತ
ಪರಮಭಗವದ್ಭಕ್ತವೃಂದಸುಪ್ರೀತ
ವರದೇಂದ್ರವಿಠಲನ ಪ್ರಿಯಸುತ ತಾತ ॥3॥

ಅದ್ವೈತಮತತಿಮಿರಧ್ವಂಸನ ಧೀರ
ಶುದ್ಧವೈಷ್ಣವಮತಸ್ಥಾಪನಾಪರ (ಚಾರ್ಯ)
ಸದ್ವಾಕ್ಯದಿಂದಲಿ ಹರಿಪಾರಾವಾರ
ಮಧ್ವಸುಂದರವಿಠಲನ ಸುಕುಮಾರ ॥4॥

ವರದೇಶವಿಠಲ ವರದೇಂದ್ರವಿಠಲ
ಸುಂದರವಿಠಲ ಆನಂದವಿಠಲನ್ನ
ಪರಿಪರಿವಿಧದಲ್ಲಿ ಕರುಣವ ಪಡೆದಿಹ
ಗುರುಜಗನ್ನಾಥವಿಠಲನ ನಿಜದೂತ ॥5॥

ಶ್ರೀ

<53>
ನಿನ್ನನೆ ನಂಬಿದೆ ಅನ್ಯರೊಬ್ಬರ ಕಾಣೆ ಮಧ್ವರಾಯಾ ॥ಪ॥

ನಿಮ್ಮ ಸಿದ್ಧಾಂತದಿ ಮನವ ನಿಲ್ಲಿಸಯ್ಯ ಮಧ್ವರಾಯಾ ॥ಅ.ಪ॥

ತಂದೆ ತಾಯಿ ಬಂಧು ಬಗವೆಲ್ಲವು ನೀನೆ ಮಧ್ವರಾಯಾ
ಎಂದೆಂದಿಗು ನಿಮ್ಮ ಪೊಂದಿರುವಂತೆ ಮಾಡೈ ಮಧ್ವರಾಯಾ ॥1॥

ಬಾಲಕೃಷ್ಣನ ಸೇವೆ ಮೇಲಾಗಿ ಮಾಡುವ ಮಧ್ವರಾಯಾ
ಮೂಲಮೂವತ್ತೇಳು ಮೇಲು ಗ್ರಂಥಗಳಿತ್ತೆ ಮಧ್ವರಾಯಾ ॥2॥

ಶ್ರೀನಿಧಿಕೃಷ್ಣ ಜಗಕೆಲ್ಲ ದೊರೆಯೆಂಬ ಮಧ್ವರಾಯಾ
ಆನಂದಮುನಿಯೆಂದು ನೀ ಹೆಸರು ಪೊತ್ತೆ ಮಧ್ವರಾಯಾ ॥4॥

ಅಜಪದಕೆ ಬಂದು ಅಖಿಳರ ಪಾಲಿಪ ಮಧ್ವರಾಯಾ
ವಿಜಯಸಾರಥಿಕೃಷ್ಣ ವಿಜಯವಿಠ್ಠಲಪ್ರಿಯ ಮಧ್ವರಾಯಾ ॥5॥

<54>
ಬಿಡುವೇನೇನಯ್ಯಾ ಹನುಮ ನಿನ್ನ ಬಿಡುವೇನೇನಯ್ಯಾ ॥ಪ॥

ಬಿಡುವೆನೇನೋ ಹನುಮ ನಿನ್ನ ಅಡಿಗಳಿಗೆ ಎರಗುವೆ ನಾನು
ದೃಢಭಕ್ತಿಸುಜ್ಞಾನವನ್ನು ತಡಮಾಡದಲೆ ಕೊಡುವೋ ತನಕ ॥ಅ.ಪ॥

ಹಸ್ತವ ಮ್ಯಾಲಕೆ ಎತ್ತಿದರೇನು ಹಾರಗಾಲ ಹಾಕಿದರೇನು
ಭೃತ್ಯನು ನಿನ್ನವನು ನಾನು ಹಸ್ತಿವರದನ ತೋರೋ ತನಕ ॥1॥

ಹಲ್ಲುಮುಡಿಯ ಕಚ್ಚಿದರೇನು ಗುಲ್ಲು ಮಾಡಿದರಂಜುವನಲ್ಲ
ಪುಲ್ಲನಾಭಶ್ರೀಲಕುಮೀಲೋಲನ ಇಲ್ಲಿಗೆ ತಂದು ತೋರುವ ತನಕ ॥2॥

ಡೊಂಕುಮೋರೆಯಿಂ ಬಾಲವ ತಿದ್ದಿ ಹುಂಕರಿಸಿದರೆ ಅಂಜುವನಲ್ಲ
ಕಿಂಕರನು ನಿನ್ನವನೋ ನಾನು ವೆಂಕಟವಿಠಲನ ತೋರುವ ತನಕ ॥3॥

ೞೞ

<55>
ಜಯ ಜಯ ಜಗತ್ರಾಣ ಜಗದೊಳಗೆ ಸತ್ರಾಣ
ಅಖಿಳ ಗುಣ ಸದ್ಧಾಮ ಮಧವನಾಮ ॥ಪ॥

ಆವ ಕಚ್ಛಪರೂಪದಿಂದಲಂಡೋದಕದಿ ।
ಓವಿ ಧರಿಸಿದ ಶೇಷಮೂರುತಿಯನು
ಆವವನ ಬಳಿವಿಡಿದು ಹರಿಯ ಸುರರೈದುವರು ।
ಆ ವಾಯು ನಮ್ಮ ಕುಲಗುರುರಾಯನು ॥1॥

ಆವವನು ದೇಹದೊಳಗಿರಲು ಹರಿ ನೆಲಸಿಹನು ।
ಆವವನು ತೊಲಗೆ ಹರಿ ತೊಲಗುವ
ಆವವನು ದೇಹದೊಳ ಹೊರಗೆ ನಿಯಾಮಕನು ।
ಆ ವಾಯು ನಮ್ಮ ಕುಲಗುರುರಾಯನು ॥2॥

ಕರಣಾಭಿಮಾನಿಗಳು ಸುರರು ದೇಹವ ಬಿಡಲು ।
ಕುರುಡ ಕಿವುಡ ಮೂಕನೆಂದೆನಿಸುವ
ಪರಮಮುಖ್ಯಪ್ರಾಣ ತೊಲಗಲಾ ದೇಹವನು ।
ಅರಿತು ಪೆಣವೆಂದು ಪೇಳುವರು ಬುಧಜನ ॥3॥

ಸುರರೊಳಗೆ ನರರೊಳಗೆ ಸರ್ವ ಭೂತಗಳೊಳಗೆ ।
ಪರತರನೆನಿಸಿ ನಿಯಾಮಿಸಿ ನೆಲಸಿಹ
ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು ।
ಗುರುಕುಲತಿಲಕ ಮುಖ್ಯಪವಮಾನನು ॥4॥

ತ್ರೇತೆಯಲಿ ರಘುಪತಿಯ ಸೇವೆಗೋಸುಗ ಬಂದು ।
ವಾತಸುತ ಹನುಮಂತನೆಂದೆನಿಸಿದ

ಪೋತಭಾವದಿ ತರುಣಿಬಿಂಬಕ್ಕೆ ಲಂಘಿಸಿದ ।
ಈತಗೆಣೆಯಾರು ಮೂರುಲೋಕದೊಳಗೆ ॥5॥

ತರುಣಿಗಭಿಮುಖವಾಗಿ ಶಬ್ದಶಾಸ್ತ್ರವ ಪಠಿಸಿ ।
ಉರವಣಿಸಿ ಹಿಂದುಮುಂದಾಗಿ ನಡೆದ
ಪರಮಪವಮಾನಸುತ ಉದಯಾಸ್ತಶೈಲಗಳ ।
ಭರದಿಯೈದಿದಗೀತಗುಪಮೆ ಉಂಟೇ ॥6॥

ಅಖಿಳವೇದಗಳ ಸಾರಪಠಿಸಿದನು ಮುನ್ನಲ್ಲಿ ।
ನಿಖಿಳವ್ಯಾಕಣಗಳ ಇವ ಪಠಿಸಿದ
ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು ।
ಮುಖ್ಯಪ್ರಾಣನನು ರಾಮನನುಕರಿಸಿದ ॥7॥

ತರಣಿಸುತನನು ಕಾಯ್ದು ಶರಧಿಯನು ನೆರೆದಾಟಿ ।
ಧರಣಿಸುತೆಯಳ ಕಂಡು ದನುಜರೊಡನೆ
ಭರದಿ ರಣವನೆ ಮಾಡಿ ಗೆಲಿದು ದಿವ್ಯಾಸ್ತ್ರಗಳ ।
ಉರುಹಿ ಲಂಕೆಯ ಬಂದ ಹನುಮಂತನು ॥8॥

ಹರಿಗೆ ಚೂಡಾಮಣಿಯನಿತ್ತು ಹರಿಕೂಡಿ ।
ಶರಧಿಯನು ಕಟ್ಟಿ ಬರಲು ರಕ್ಕಸರನು
ಒರಸಿ ರಣದಲಿ ದಶಶಿರನ ಹುಡಿಗುಟ್ಟಿ ।
ಮೆರೆದ ಹನುಮಂತ ಬಲವಂತ ಧೀರ ॥9॥

ಉರಗಬಂಧಕೆ ಸಿಲುಕೆ ಕಪಿವರರು ಮೈಮರೆಯೆ ।
ತರಣಿಕುಲತಿಲಕನಾಜ್ಞೆಯ ತಾಳಿದ
ಗಿರಿಸಹಿತ ಸಂಜೀವನವ ಕಿತ್ತು ತಂದಿತ್ತ ಹರಿವರಗೆ ।
ಸರಿಯುಂಟೆ ಹನುಮಂತಗೆ ॥10॥

ವಿಜಯರಘುಪತಿ ಮೆಚ್ಚಿ ಧರಣಿಸುತೆಯಳಿಗೀಯೆ ।
ಭಜಿಸಿ ಮೌಕ್ತಿಕದ ಹಾರವನು ಪಡೆದ

ಅಜಪದವಿಯನು ರಾಮ ಕೊಡವೆನೆನೆ ಹನುಮಂತ ।
ನಿಜಭಕುತಿಯನೆ ಬೇಡಿ ವರವ ಪಡೆದ ॥11॥

ಆ ಮಾರತನೆ ಭೀಮನೆನಿಸಿ ದ್ವಾಪರದಲ್ಲಿ ।
ಸೋಮಕುಲದಲಿ ಜನಿಸಿ ಪಾರ್ಥನೊಡನೆ
ಭೀಮವಿಕ್ರಮರಕ್ಕಸರ ಮುರಿದೊಟ್ಟಿದ ಆ ।
ಮಹಿಮನಮ್ಮ ಕುಲಗುರುರಾಯನು ॥12॥

ಕರದಿಂದ ಶಿಶುಭಾವನಾದ ಭಿಮನ ಬಿಡಲು ।
ಗಿರಿವಡೆದು ಶತಶೃಂಗವೆಂದೆನಿಸಿತು
ಹರಿಗಳ ಹರಿಗಳಿಂ ಕರಿಗಳ ಕರಿಗಳಿಂ ಅರೆವ ।
ವೀರನಿಗೆ ಸುರನರರು ಸರಿಯೇ ॥13॥

ಕುರುಪ ಗರಳವನಿಕ್ಕೆ ನೆರೆ ಉಂಡು ತೇಗಿ ।
ಹರಿದುರಗಗಳ ಮ್ಯಾಲೆ ಬಿಡಲವನೊರಸಿದ
ಅರಗಿನರಮನೆಯಲ್ಲಿ ಉರಿಯನಿಕ್ಕಲು ವೀರ ।
ಧರಿಸಿ ಜಾಹ್ನವಿಗೊಯ್ದ ತನ್ನನುಜರ ॥14॥

ಅಲ್ಲಿರ್ದ ಬಕಹಿಡಂಬಕರೆಂಬ ರಕ್ಕಸರ ।
ನಿಲ್ಲದೊರಸಿದ ಲೋಕಕಂಟಕರನು
ಬಲ್ಲಿದಸುರರ ಗೆಲಿದು ದ್ರೌಪದಿಯ ಕೈವಿಡಿದು ।
ಎಲ್ಲ ಸುಜನರಿಗೆ ಹರುಷವ ತೋರಿದ ॥15॥

ರಾಜಕುಲವಜ್ರನೆನಿಸಿದ ಮಾಗಧನ ಸೀಳಿ ।
ರಾಜಸೂಯಯಾಗವನು ಮಾಡಿಸಿದನು
ಆಜಿಯೊಳು ಕೌರವರ ಬಲವ ಸವರುವೆನೆಂದು ।
ಮೂಜಗವರಿಯೆ ಕಂಕಣ ಕಟ್ಟಿದ ॥16॥

ಮಾನನಿಧಿದ್ರೌಪದಿಯ ಮನದಿಂಗಿತವನರಿತು ।
ದಾನವರ ಸವರಬೇಕೆಂದು ಬ್ಯಾಗ
ಕಾನನವ ಪೊಕ್ಕು ಕಿಮ್ಮೀರಾದಿಗಳ ತರಿದು ।

ಮಾನಿನಿಗೆ ಸೌಗಂಧಿಕವನೆ ತಂದ ॥17॥

ದುರುಳಕೀಚಕನು ತಾಂ ದ್ರೌಪದಿಯ ಚೆಲುವಿಕೆಗೆ ।
ಮರುಳಾಗಿ ಕರೆಕರೆಯ ಮಾಡಲವನಾ
ಗರಡಿಮನೆಯಲ್ಲಿ ಒರೆಸಿ ಅವನನ್ವಯವ ।
ಕುರುಪನಟ್ಟಿದ ಮಲ್ಲಕುಲವ ಸದೆದ ॥18॥

ವೈರಿದುಶ್ಯಾಸನ್ನ ರಣದಲ್ಲಿ ಎಡೆಗೆಡಹಿ ।
ವೀರನರಹರಿಯ ಲೀಲೆಯ ತೋರಿದ
ಕೌರವರ ಬಲಸವರಿ ವೈರಿಗಳ ನೆಗ್ಗೊತ್ತಿ ।
ಓರಂತೆ ಕೌರವನ ಮುರಿದು ಮೆರೆದ ॥19॥

ಗುರುಸುತನು ಸಂಗರದಿ ನಾರಾಯಣಾಸ್ತ್ರವನು ।
ಉರವಣಿಸಿ ಬಿಡಲು  ಶಸ್ತ್ರವ ಬಿಸುಟರು
ಹರಿಕೃಪೆಯ ಪಡೆದಿರ್ದ ಭೀಮ ಹುಂಕಾರದಲಿ ।
ಹರಿಯ ದಿವ್ಯಾಸ್ತ್ರವನು ನೆರೆ ಅಟ್ಟಿದ ॥20॥

ಚಂಡವಿಕ್ರಮನು ಗದೆಗೊಂಡು ರಣದಿ ಭೂ–।
ಮಂಡಲದೊಳಿದಿರಾಂತ ಖಳರನೆಲ್ಲಾ
ಹಿಂಡಿ ಬಸುಟಿಹ ವೃಕೋದರನ ಪ್ರತಾಪವನು
ಕಂಡುನಿಲ್ಲುವರಾರು ತ್ರಿಭುವನದೊಳು ॥21॥

ದಾನವರು ಕಲಿಯುಗದೊಳವತರಿಸಿ ವಿಬುಧರೊಳು ।
ವೇನನ ಮತವನರುಹಲದನರಿತು
ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ ।
ಮಾನನಿಧಿ ಮಧ್ವಾಖ್ಯನೆಂದೆನಿಸಿದ ॥22॥

ಅರ್ಭಕತನದೊಳೈದಿ ಬದರಿಯಲಿ ಮಧ್ವಮುನಿ ।
ನಿರ್ಭಯದಿ ಸಕಲ ಶಾಸ್ತ್ರವ ಪಠಿಸಿದ
ಉರ್ವಿಯೊಳು ಮಾಯೆ ಬೀರಲು ತತ್ವಮಾರ್ಗವನು
ಓರ್ವ ಮಧ್ವಮುನಿ ತೋರ್ದ ಸುಜನರ್ಗೆ ॥23॥

ಸರ್ವೆಶ ಹರ, ವಿಶ್ವ ಎಲ್ಲ ತಾ ಪುಸಿಯೆಂಬ ।
ದುರ್ವಾದಿಗಳ ಮತವ ನೆರೆ ಖಂಡಿಸಿ
ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದಾ ।
ಶರ್ವಾದಿಗೀರ್ವಾಣಸಂತತಿಯಲಿ ॥24॥

ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿ ।
ಪದಕೆರಗಿ ಅಖಿಳವೇದಾರ್ಥಗಳನು
ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ–।
ವೈದಿದ ಮಧ್ವಮುನಿರಾಯಗಭಿವಂದಿಪೆ ॥25॥

ಜಯಜಯತು ದುರ್ವಾದಿಮತತಿಮಿರಮಾರ್ತಾಂಡ ।
ಜಯಜಯತು ವಾದಿಗಜಪಂಚಾನನ
ಜಯಜಯತು ಚಾರ್ವಾಕಗರ್ವಪರ್ವತಕುಲಿಶ ।
ಜಯಜಯ ಜಗನ್ನಾಥ ಮಧ್ವನಾಥ ॥26॥

ತುಂಗಕುಲಗುರುವರನ ಹೃತ್ಕಮಲದಲಿ ನಿಲಿಸಿ ।
ಭಂಗವಿಲ್ಲದೆ ಸುಖವ ಸುಜನಕೆಲ್ಲ
ಹಿಂಗದೆ ಕೊಡುವ ನಮ್ಮ ಮಧ್ವಾಂತರಾತ್ಮಕ ।
ರಂಗವಿಠಲನೆಂದು ನೆರೆ ಸಾರಿರೈ ॥27॥

## ಶ್ರೀಜಗನ್ನಾಥದಾಸರ ಫಲಶ್ರುತಿ

ಸೋಮ ಸೂರ್ಯೋಪರಾಗದಿ ಗೋಸಹಸ್ರಗಳ ।
ಭೂಮಿದೇವರಿಗೆ ಸುರನದಿಯ ತೀರದಿ
ಶ್ರೀಮುಕುಂದಾರ್ಪಣವೆನುತ ಕೊಟ್ಟ ಫಲವಕ್ಕು ।
ಈ ಮಧ್ವನಾಮ ಬರೆದೋದಿದರ್ಗೆ ॥1॥

ಪುತ್ರರಿಲ್ಲದವರು ಸತ್ಪುತ್ರರೈದುವರು ಸ–।
ರ್ವತ್ರದಲಿ ದಿಗ್ವಿಜಯವಹುದು ಸಕಲ
ಶತ್ರುಗಳು ಕೆಡುವರಪಮೃತ್ಯು ಬರಲಂಜುವುದು ।

ಸೂತ್ರನಾಮಕನ ಸಂಸ್ತುತಿ ಮಾತ್ರದಿ ॥2॥

ಶ್ರೀಪಾದರಾಯ ಪೇಳಿದ ಮಧ್ವನಾಮ ಸಂ-।
ತಾಪಕಳೆದಖಿಳ ಸೌಖ್ಯವನೀವುದು
ಶ್ರೀಪತಿ ಜಗನ್ನಾಥವಿಠಲನ ತೋರಿ ಭವ ।
ಕೂಪಾರದಿಂದ ಕಡೆ ಹಾಯಿಸುವುದು ॥3॥

<56>
ಮಂಗಳಂ ಭಾರತಿರಮಣಗೆ ಜಯ
ಮಂಗಳಂ ನಿಜಭಕ್ತಪರಿಪಾಲಗೆ ॥ಪ॥

ಅಂಜನಾ ಕೇಸರಿ ತನಯಗೆ ಮಂಗಳ
ಕಂಜಾಪ್ತಜನ ಕಾಯ್ದಗೆ ಮಂಗಳ
ಅಂಜನಾದ್ರಿ ತಂದಾತಗೆ ಮಂಗಳ
ಸಂಜಯವಂತ ಶ್ರೀ ಹನುಮಂತಗೆ ॥1॥

ಕುಂತಿ ಪಾಂಡುಜನಾಗಿ ಕುವಲಯದೊಳು ಬಲ-।
ವಂತರಾಯರಾ ತರಿದಗೆ
ದಂತಿಪುರವ ಬೇಡಿ ಕೊಡದಿರೆ ಕೌರವರ
ಸಂತತಿ ಸವರಿದ ಸುಖಪೂರ್ಣಗೆ ॥2॥

ಮೂರವತಾರ ಮಾಡಿದಗೆ ಮಂಗಳ
ಮೂರೇಳು ಮತಗಳ ಮುರಿದವಗೆ ಮಂಗಳ
ಕಾರುಣ್ಯಸಿಂಧು ಜಗನ್ನಾಥವಿಠಲನ
ಆರಾಧಿಸಿದ ಮಧ್ವಮುನಿರಾಯಗೇ ॥3॥